ಪರಿಶೋಧನೆ ಮಾಡಿಸಲಾಗಿ ಕಂಡುಬಂದ ಗಂಭೀರ ಅವ್ಯವಹಾರಗಳ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸಿದ್ದರು. ಸರ್ಕಾರವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರ ವರದಿ ಹಾಗೂ ಈ ಬಗ್ಗೆ ಮಹಾಲೇಖಪಾಲರ ವರದಿಯನ್ನು ಅವಗಾಹಿಸಿದಾಗ ಸದರಿ ವರದಿಗಳಂತೆ ಸುಮಾರು 41,57,694 ರೂ.ಗಳ ಉಗ್ರಾಣ ಸಾಮಗ್ರಿಗಳ ದುರುಪಯೋಗ/ಅವ್ಯವಹಾರವಾಗಿದೆಯೆಂದು ಮೇಲ್ನೋಟಕ್ಕೆ ಕಂಡು ಬಂದುದರಿಂದ ಈ ಬಗ್ಗೆ ಸಂಬಂಧಪಟ್ಟವರೆಲ್ಲರ ಮೇಲೆ ಇಲಾಖಾ ವಿಚಾರಣೆ ಹೂಡಲು ನಿರ್ಧರಿಸಿ ಕರಡು ಆರೋಪ ಪಟ್ಟಿ ಕಳುಹಿಸಲು ಹಾಗೂ ಶ್ರೀ ಬಿ.ಕೆ. ಮಂಗಳಗಿ ಇವರು ಈ ಪ್ರಕರಣದಲ್ಲಿ ಎಸಗಿರುವರೆನ್ನಲಾದ ಕ್ರಿಮಿನಲ್ ನಡತೆಗೆ ಸಂಬಂಧಿಸಿದಂತೆ ಅವರ ಮೇಲೆ ಕ್ರಿಮಿನಲ್ ಮೊಕದ್ದಮೆ ಸಹ ಹೂಡಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗೆ ನಿರ್ದೇಶನ ನೀಡಿತ್ತು. ಅದರಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಾವಣಗೆರೆ ಇವರು ಶ್ರೀ ಮಂಗಳಗಿ ಇವರಿಗೆ ಸಂಬಂಧಿಸಿದಂತೆ ಕ್ರಿಮಿನಲ್ ಮೊಕದ್ದಮೆ ಹೂಡಲು ಕ್ರಮ ಕೈಗೊಂಡು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 24.11.2000ರ ಪತ್ರದಲ್ಲಿ ಈ ಕೆಳಕಂಡ ಅಧಿಕಾರಿ:ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕರಡು ದೋಷಾರೋಪಣಾ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

1. ಶ್ರೀ ವೈ. ರುದ್ರಮುನಿ, ಕಾರ್ಯಪಾಲಕ ಇಂಜಿನಿಯರ್,
2. ಶ್ರೀ ಎಸ್.ಎ. ಪಾಟೀಲ್, ಕಾರ್ಯಪಾಲಕ ಇಂಜಿನಿಯರ್,
3. ಶ್ರೀ ಎಂ. ಕೇಶವಮೂರ್ತಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹಾಗೂ (ಕಾಪಾಇಂ ಪ್ರಭಾರ),
4. ಶ್ರೀ ಇ. ಶಾಂತರಾಂ, ಲೆಕ್ಕಾಧೀಕ್ಷಕ,
5. ಶ್ರೀ ಬಿ. ಯುನಸ್, ಲೆಕ್ಕಾಧೀಕ್ಷಕ,
6. ಶ್ರೀ ಗೌಸ್ ಮೊಯಿದ್ದೀನ್, ಲೆಕ್ಕಾಧೀಕ್ಷಕ,
7. ಶ್ರೀ ಬಿ.ಕೆ. ಮಂಗಳಗಿ, ಪ್ರಥಮ ದರ್ಜೆ ಉಗ್ರಾಣ ಪಾಲಕ,
8. ಶ್ರೀ ಮಂಜುನಾಥ್, ಉಗ್ರಾಣಪಾಲಕ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲ್ಕಂಡ ಅಧಿಕಾರಿ:ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರನ್ವಯ ಇಲಾಖೆ ವಿಚಾರಣೆ ಹೂಡಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 14.2.01ರ ಕಾರಣ ಕೇಳುವ ನೋಟೀಸ್‌ನೊಂದಿಗೆ ಆರೋಪಪಟ್ಟಿ ಜಾರಿ ಮಾಡಿತ್ತು. ಆಪಾದಿತ ಅಧಿಕಾರಿ:ನೌಕರರು ತಮ್ಮ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಂತೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದರು. ಸದರಿಯವರ ಲಿಖಿತ ಹೇಳಿಕೆಗಳನ್ನು ಸರ್ಕಾರವು ಪರಿಶೀಲಿಸಿ ಅವುಗಳು ಸಮರ್ಪಕವಾಗಿಲ್ಲವೆಂದು ಕಂಡು ಬಂದುದರಿಂದ ಮತ್ತು ಆಪಾದಿತ ಅಧಿಕಾರಿ:ನೌಕರರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬಂದುದರಿಂದ ಆಪಾದಿತರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶವನ್ನು ಅರಿಯಲು ಪ್ರಕರಣದಲ್ಲಿ ವಿವರವಾದ ವಿಚಾರಣಾ ನಡೆಸಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಆದೇಶದಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಸೋಸಲೆ ಇಂದೂಧರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ದಾವಣಗೆರೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿತ್ತು. ಅದರಂತೆ ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (5)ರಂತೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

ವಿಚಾರಣಾಧಿಕಾರಿಗಳು ಪ್ರಕರಣದಲ್ಲಿನ ಆಪಾದಿತರಾದ ಶ್ರೀ ಬಿ.ಕೆ. ಮಂಗಳಗಿ, ಪ್ರಥಮ ದರ್ಜೆ ಉಗ್ರಾಣಪಾಲಕ ಇವರ ಮೇಲಿನ ಎಲ್ಲಾ ಆಪಾದನೆಗಳು ರುಜುವಾತಾಗಿರುವುದಾಗಿ ಹಾಗೂ ಉಳಿದವರ ಮೇಲಿನ ಆಪಾದನೆಗಳು ರುಜುವಾತಾಗಿರುವುದಿಲ್ಲವೆಂದು ಸರ್ಕಾರಕ್ಕೆ ವರದಿ ಮಾಡಿದ್ದರು. ಉಳಿದ ಆಪಾದಿತರ ಮೇಲಿನ ಆರೋಪಗಳು ವಿವರವಾದ ವಿಚಾರಣೆಯಲ್ಲಿ ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದರೂ ಸಹ ವಿಭಾಗದ ಮುಖ್ಯಸ್ಥರಾದ ಕಾರ್ಯಪಾಲಕ ಇಂಜಿನಿಯರ್‌ರಾದ ಶ್ರೀ ರುದ್ರಮುನಿ, ಶ್ರೀ ಎಸ್.ಎ. ಪಾಟೀಲ್, ಮತ್ತು ಶ್ರೀ ಎಂ. ಕೇಶವಮೂರ್ತಿ ಇವರುಗಳು ಲೆಕ್ಕಾಧೀಕ್ಷಕರೊಡನೆ ಕಾಲಕಾಲಕ್ಕೆ ಉಪವಿಭಾಗದ ದಾಖಲೆಗಳನ್ನು ಪರಿಶೀಲಿಸಿ ಮೇಲ್ವಿಚಾರಣೆ ನಡೆಸಿದಲ್ಲಿ ಅಕ್ರಮ ತಡೆಯಬಹುದಿತ್ತು. ಲೆಕ್ಕಾಧೀಕ್ಷಕರಾದ ಶ್ರೀ ಗೌಸ್ ಮೊಯಿದ್ದೀನ್, ಶ್ರೀ ಬಿ. ಯುನಸ್, ಮತ್ತು ಶ್ರೀ ಇ. ಶಾಂತರಾಂ ಇವರುಗಳು ಉಗ್ರಾಣ ದಾಖಲೆಗಳನ್ನು ಪರಿಶೀಲಿಸದೆ ಉಪವಿಭಾಗದ ಲೆಕ್ಕ ಪತ್ರಗಳನ್ನು ಪರಿಶೀಲಿಸದೆ ಕರ್ತವ್ಯಲೋಪವೆಸಗಿದ್ದಾರೆಂದೂ, ಹಾಗೂ ಶ್ರೀ ಮಂಜುನಾಥ್, ಉಗ್ರಾಣಪಾಲಕ ಇವರು ಸಹಾ ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ವಿಫಲರಾಗಿದ್ದಾರೆಂದು ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪದೆ, ನಿಯಮ 11(ಎ)ರಂತೆ ತನ್ನದೆ ಆದ ನಿರ್ಣಯಗಳನ್ನು ದಾಖಲಿಸಿ ಆಪಾದಿತರ ಮೇಲಿನ ಆಪಾದನೆಗಳು ಮೇಲಿನಂತೆ ರುಜುವಾತಾಗುತ್ತವೆಂದು ನಿರ್ಣಯಿಸಿ ತನ್ನ ನಿರ್ಣಯಗಳನ್ನು ದಾಖಲಿಸಿ ಆಪಾದಿತ ಅಧಿಕಾರಿ:ನೌಕರರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಎರಡನೇ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಿತ್ತು.

ಸದರಿ ಎರಡನೇ ಕಾರಣ ಕೇಳುವ ನೋಟಿಸ್‌ಗೆ ಆಪಾದಿತ ಅಧಿಕಾರಿ:ನೌಕರರು ಮೇಲೆ ಓದಲಾದ ಕ್ರಮ ಸಂಖ್ಯೆ: (7)ರಂತೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆರೋಪಗಳಿಂದ ದೋಷಾಮುಕ್ತಗೊಳಿಸುವಂತೆ ಸರ್ಕಾರವನ್ನು ಕೋರಿದ್ದರು. ಆಪಾದಿತರು 2ನೇ ಕಾರಣ ಕೇಳುವ ನೋಟಿಸ್‌ಗೆ ನೀಡಿರುವ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿದಾಗ ಸದರಿ ಅಕ್ರಮಗಳಿಗೆ ಕಾರ್ಯಪಾಲಕ ಇಂಜಿನಿಯರ್‌ರಾದ ಶ್ರೀ ರುದ್ರಮುನಿ, ಶ್ರೀ ಎಸ್.ಎ. ಪಾಟೀಲ್ (ಪ್ರಸ್ತುತ ನಿಧನ ಹೊಂದಿದ್ದಾರೆ), ಮತ್ತು ಶ್ರೀ ಬಿ.ಕೆ. ಮಂಗಳಗಿ, ಪ್ರಥಮ ದರ್ಜೆ ಉಗ್ರಾಣಪಾಲಕ ಇವರುಗಳು ಕಾರಣವೆಂದು ಸಾಕ್ಷಾಧಾರಗಳಿಂದ ಕಂಡು ಬರುತ್ತಿರುವುದರಿಂದ ಹಾಗೂ ಇವರುಗಳು ಸಲ್ಲಿಸಿರುವ ಲಿಖಿತ ಹೇಳಿಕೆಗಳನ್ನು ಒಪ್ಪಲು ಯಾವುದೇ ಸಕಾರಣಗಳು ಇರುವುದಿಲ್ಲವಾದ್ದರಿಂದ ಇವರುಗಳ ಮೇಲಿನ

ಆರೋಪಗಳು ರುಜುವಾತಾಗುತ್ತವೆಂದು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಬಗ್ಗೆ ವಿಧಿವಿಧಾನಗಳನ್ನು ಪೂರೈಸಿದ ನಂತರ ಪ್ರತ್ಯೇಕ ಆದೇಶ ಹೊರಡಿಸಲು ಸರ್ಕಾರವು ನಿರ್ಣಯಿಸಿದೆ.

ಪ್ರಕರಣದಲ್ಲಿನ ಉಳಿದ ಆಪಾದಿತ ಅಧಿಕಾರಿ:ನೌಕರರಾದ ಲೆಕ್ಕಾಧೀಕ್ಷಕರಾದ ಶ್ರೀ ಗೌಸ್ ಮೊಯಿದ್ದೀನ್, ಶ್ರೀ ಬಿ. ಯುನಸ್, ಮತ್ತು ಶ್ರೀ ಇ. ಶಾಂತರಾಂ ಇವರುಗಳು ತಮ್ಮ ಲಿಖಿತ ಹೇಳಿಕೆಗಳಲ್ಲಿ ತಿಳಿಸಿರುವಂತೆ ಎಲ್ಲಾ ಆರೋಪಗಳು ಉಗ್ರಾಣ ಸಾಮಗ್ರಿಗಳ ಕೊರತೆಗಳಿಗೆ ಸಂಬಂಧಿಸಿದವುಗಳಾಗಿದ್ದು, ಲೆಕ್ಕ ಪತ್ರಗಳ ಸಂಕಲನ ಕಾರ್ಯದ ನಂತರ ಸದರಿ ವ್ಯವಹಾರಗಳನ್ನು ಉಗ್ರಾಣಪಾಲಕರಾದ ಶ್ರೀ ಬಿ.ಕೆ. ಮಂಗಳಗಿ ಇವರು ಎಸಗಿರುವುದಾಗಿ ತಿಳಿಸಿದ್ದು ಹಾಗೂ ಅವರು ಉಗ್ರಾಣ ಶಾಖೆಯಲ್ಲಿ ನಡೆಯುತ್ತಿದ್ದ ಸಂಹಿತೆ ನಿಯಮಗಳ ಉಲ್ಲಂಘನೆ, ಉಗ್ರಾಣಪಾಲಕರ ಬೇಜವಾಬ್ದಾರಿತನ ಇತ್ಯಾದಿಗಳನ್ನು ನಿಯಂತ್ರಿಸುವಲ್ಲಿ ಸಾಕಷ್ಟು ಪ್ರಯತ್ನಪಟ್ಟಿರುವುದು ಅವರು ನೀಡಿರುವ ದಾಖಲೆಗಳು: ಹೇಳಿಕೆಗಳಿಂದ ಕಂಡು ಬರುವುದರಿಂದ ಉಗ್ರಾಣ ಶಾಖೆಯಲ್ಲಿ ನಡೆದಿರುವ ಉಗ್ರಾಣ ಸಾಮಗ್ರಿಗಳ ದುರುಪಯೋಗಕ್ಕೆ ಅವರನ್ನು ಹೊಣೆಗಾರರನ್ನಾಗಿ ಮಾಡುವುದು ಸೂಕ್ತವಲ್ಲವೆಂದು ಸರ್ಕಾರವು ನಿರ್ಧರಿಸಿದೆ. ಶ್ರೀ ಮಂಜುನಾಥ, ಉಗ್ರಾಣಪಾಲಕ ಇವರು ನೀಡಿರುವ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿ ಅವರೂ ಸಹಾ ಪ್ರಕರಣದಲ್ಲಿ ಭಾಗಿಯಾಗಿಲ್ಲವೆಂಬ ನಿರ್ಣಯಕ್ಕೆ ಬಂದು ಅವರನ್ನು ಆರೋಪಗಳಿಂದ ದೋಷಮುಕ್ತಗೊಳಿಸಲು ಸರ್ಕಾರವು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 44 ಇಎನ್‌ಕ್ಯೂ 2000, ಬೆಂಗಳೂರು, ದಿನಾಂಕ:23ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಹರಪನಹಳ್ಳಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಕಛೇರಿಯ ಉಗ್ರಾಣದಲ್ಲಿನ ಅಕ್ರಮಗಳಿಗೆ ಸಂಬಂಧಿಸಿದಂತೆ ಅಂದಿನ ಲೆಕ್ಕಾಧೀಕ್ಷಕರಾದ ಶ್ರೀ ಗೌಸ್ ಮೊಯಿದ್ದೀನ್, ಶ್ರೀ ಬಿ. ಯುನಸ್, ಶ್ರೀ ಇ. ಶಾಂತರಾಂ, ಮತ್ತು ಶ್ರೀ ಸಿ. ಮಂಜುನಾಥ, ಉಗ್ರಾಣಪಾಲಕ ಇವರುಗಳ ಮೇಲೆ ಮಾಡಲಾಗಿದ್ದ ಆರೋಪಗಳನ್ನು ಕೈಬಿಟ್ಟು ಅವರನ್ನು ದೋಷಾಮುಕ್ತರನ್ನಾಗಿಸಿದೆ.

ಪ್ರಕರಣಕ್ಕೆ ಸಂಬಂಧಿಸಿದ ಇನ್ನುಳಿದ ಆಪಾದಿತ ಅಧಿಕಾರಿ:ನೌಕರರ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಪಿ.ಆರ್. 1251 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಬಿ.ಐ. ತರಳಿ ಸಮೂಹ 'ಬಿ' ಅಧಿಕಾರಿಗಳು (ನಿವೃತ್ತ)ರವರು ಸವದತ್ತಿ ತಾಲ್ಲೂಕು ಯಲ್ಲಮ್ಮ ಗುಡ್ಡ ಶ್ರೀ ರೇಣುಕಾ ಯಲ್ಲಮ್ಮ ದೇವಾಲಯದ ಕಾರ್ಯನಿರ್ವಾಹಕ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಂಇ 107 ಮುಸೇವಿ 2001, ದಿನಾಂಕ: 16.05.2003

2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಸಿಬ್ಬಂದಿ (3)/ಸಿಆರ್/6/2002-2003 ದಿನಾಂಕ: 26.07.2003.

**ಪ್ರಸ್ತಾವನೆ:**

ಶ್ರೀ ಬಿ.ಐ. ತರಳಿ ಗ್ರೂಪ್ 'ಬಿ' ಅಧಿಕಾರಿ (ನಿವೃತ್ತ)ರವರು ಈ ಹಿಂದೆ ಸವದತ್ತಿ ತಾಲ್ಲೂಕು ಯಲ್ಲಮ್ಮ ಗುಡ್ಡದ ಶ್ರೀ ರೇಣುಕಾ ಯಲ್ಲಮ್ಮ ದೇವಸ್ಥಾನದ ಕಾರ್ಯನಿರ್ವಾಹಕ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಎಸಗಿದ ಕರ್ತವ್ಯಲೋಪದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ ಸಿಸಿಎ ನಿಯಮಾವಳಿ 1957ರ ನಿಯಮ 11ರನ್ವಯ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾದ ಶ್ರೀ ಬಿ. ಶ್ರೀನಿವಾಸ ರಾವ್, ನಂಬರ್ 133, 2ನೇ ಮುಖ್ಯ ರಸ್ತೆ, ಜಯನಗರ, ಬೆಂಗಳೂರು-560 014 ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ನಿಯಮ 11(5) (ಸಿ)ರನ್ವಯ ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ನೇಮಿಸಲಾಗಿತ್ತು. ಶ್ರೀ ಬಿ. ಶ್ರೀನಿವಾಸ್ ರಾವ್ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಧೀಶರನ್ನು ಇಲಾಖೆ ವಿಚಾರಣೆ ಪ್ರಾರಂಭಿಸಲು ದಿನಾಂಕ: 12.06.2003ರ ಪತ್ರದಲ್ಲಿ ಕೋರಲಾಗಿತ್ತೆಂದು ನೋಂದಣಿ ಅಂಚೆಯ ಮೂಲಕ ಕಳುಹಿಸಿದ ಪತ್ರ ಬಟವಾಡೆಯಾಗದೆ ಅಂಚೆ ಕಛೇರಿಯಿಂದ ಹಿಂತಿರುಗಿ ಬಂದಿರುವುದರಿಂದ ವಿಚಾರಣೆ ಪ್ರಾರಂಭಿಸಿರುವುದಿಲ್ಲವೆಂದು, ಆದ್ದರಿಂದ ವಿಚಾರಣಾಧಿಕಾರಿಗಳನ್ನು ಬದಲಾಯಿಸಲು ಶಿಫಾರಸ್ಸು ಮಾಡಿ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಶ್ರೀ ಬಿ. ಶ್ರೀನಿವಾಸ್ ರಾವ್ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ರವರ ವಿಳಾಸಕ್ಕೆ ಅವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಿದ ಕ್ರಮ ಸಂಖ್ಯೆ: (1)ರ ದಿನಾಂಕ: 16.05.2003ರ ಆದೇಶ ಹಾಗೂ ದಾಖಲಾತಿಗಳನ್ನು ಅಂಚೆ ನೊಂದಣಿ ಮೂಲಕ ಸರ್ಕಾರದಿಂದ ಕಳುಹಿಸಲಾದ ಪತ್ರಗಳು ಬಟವಾಡೆಯಾಗದೆ ಹಿಂತಿರುಗಿ ಬಂದಿರುತ್ತದೆ. ಆದ ಕಾರಣ ವಿಚಾರಣಾಧಿಕಾರಿಗಳನ್ನು ಬದಲಾಯಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 107 ಮುಸೇವಿ 2001, ಬೆಂಗಳೂರು, (ಆರ್‌ಡಿ/38/ಪಸ್ವೀರ 2003) ದಿನಾಂಕ: 16ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 107 ಮುಸೇವಿ 2001, ದಿನಾಂಕ: 16.05.2003ರಲ್ಲಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರಡಿಯಲ್ಲಿ ಶ್ರೀ ಬಿ.ಐ. ತರಳಿ ಗ್ರೂಪ್ 'ಬಿ' ಅಧಿಕಾರಿ (ನಿವೃತ್ತ) ಹಾಗೂ ಅಂದಿನ ಕಾರ್ಯನಿರ್ವಾಹಕ ಅಧಿಕಾರಿಗಳು ಶ್ರೀ ರೇಣುಕಾ ಯಲ್ಲಮ್ಮ ದೇವಸ್ಥಾನ, ಯಲ್ಲಮ್ಮನ ಗುಡ್ಡ,

ಸವದತ್ತಿ ತಾಲ್ಲೂಕು ರವರ ವಿರುದ್ಧ ಮಾಡಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಿರುವ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾದ ಶ್ರೀ ಬಿ. ಶ್ರೀನಿವಾಸರಾವ್, ನಂಬರ್ 133, 2ನೇ ಮುಖ್ಯ ರಸ್ತೆ, ಜಯನಗರ, ಬೆಂಗಳೂರು-560 014ರವರನ್ನು ಬದಲಾಯಿಸಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾದ ಶ್ರೀ ಎಸ್.ಎಸ್. ಸಂಗೊಳ್ಳಿ, ನಂಬರ್, 415/2, ಎಫ್ ಬ್ಲಾಕ್, ಸಹಕಾರ ನಗರ, ಬೆಂಗಳೂರು-560 052 ರವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಕೆ.ಸಿ.ಎಸ್. (ಸಿಸಿಎ) ನಿಯಮ 1957ರ ನಿಯಮ 11 ಮತ್ತು 11(ಎ) ರಲ್ಲಿನ ವಿಧಿವಿಧಾನಗಳಿಗನುಸಾರ ವಿಚಾರಣೆ ಜರುಗಿಸಿ ವಿಚಾರಣಾ ವರದಿಯನ್ನು 3 (ಮೂರು) ತಿಂಗಳೊಳಗಾಗಿ ಸರ್ಕಾರಕ್ಕೆ ಒಪ್ಪಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಸರೋಜ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1252 ಕಂದಾಯ ಇಲಾಖೆ (ಮುಜರಾಯಿ).

**ವಿಷಯ:** ಶ್ರೀ ಎ.ವಿ. ದಿವಾಕರ್ ಹಿಂದಿನ ತಹಶೀಲ್ದಾರ್ ಬೆಂಗಳೂರು ದಕ್ಷಿಣ ತಾಲ್ಲೂಕು ಹಾಗೂ ಶ್ರೀ ಕಲ್ಲೇಶಪ್ಪ, ಹಿಂದಿನ ಆಡಳಿತಾಧಿಕಾರಿ ಬೊಮ್ಮನಹಳ್ಳಿ ಪಂಚಾಯಿತಿ ಇವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆ-ಇವರುಗಳನ್ನು ಆರೋಪಗಳಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:**
1) ದಿನಾಂಕ:8.5.01ರ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 02 ಎಡಿಇ 2001.
2) ಕರ್ನಾಟಕ ಉಪಲೋಕಾಯುಕ್ತರ ದಿನಾಂಕ: 20.6.01ರ ಆದೇಶ ಸಂಖ್ಯೆ: ಲೋಕ:ಐಎನ್‌ಕ್ಯೂ:37:14-ಎ :2001-02
3) ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ದಿನಾಂಕ: 30.9.2002ರ ವಿಚಾರಣಾ ವರದಿ ಸಂಖ್ಯೆ:ಲೋಕ:ಎಆರ್‌ಇ-4:ಇಎನ್‌ಕ್ಯೂ:40:2002-03.
4) ಗೌರವಾನ್ವಿತ ಕರ್ನಾಟಕ ಲೋಕಾಯುಕ್ತರು, ಬೆಂಗಳೂರು ಇವರ ದಿನಾಂಕ: 22-1-03ರ ಪತ್ರ ಸಂಖ್ಯೆ:ಲೋಕ:ಎಆರ್‌ಇ-4:ಇಎನ್‌ಕ್ಯೂ-40:2002-03.

**ಪ್ರಸ್ತಾವನೆ:**

ಶ್ರೀ ಎ.ವಿ. ದಿವಾಕರ್, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಹಾಗೂ ಶ್ರೀ ಕಲ್ಲೇಶಪ್ಪ, ಹಿಂದಿನ ಆಡಳಿತಾಧಿಕಾರಿ, ಬೊಮ್ಮನಹಳ್ಳಿ ಪಂಚಾಯಿತಿ, ಬೆಂಗಳೂರು ಇವರು ಫಿರ್ಯಾದುದಾರರಾದ ಶ್ರೀ ಎಂ. ಮುನಿಸ್ವಾಮಿ ಎಂಬುವವರ ಮನೆ ನಂ. 351, ಬೊಮ್ಮನಹಳ್ಳಿ ಬೆಂಗಳೂರು ಇದಕ್ಕೆ ಹೊಂದಿಕೊಂಡ ಸಾರ್ವಜನಿಕ ರಸ್ತೆಗೆ ಸಂಬಂಧಿಸಿದ 20 ಅಡಿ ಜಮೀನನ್ನು ಶ್ರೀ ಹೆಚ್.ಬಿ. ಪ್ರಕಾಶ ರೆಡ್ಡಿ, ಎಂಬುವವರು ಮನೆ ಕಟ್ಟಲು ಅನಧಿಕೃತವಾಗಿ ಉಪಯೋಗಿಸಿ ಅಕ್ರಮ ವ್ಯವಹಾರಕ್ಕೆ ಅನುವು ಮಾಡಿಕೊಟ್ಟಿರುವ ಸಂಬಂಧ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಲಾಗಿತ್ತು. ಸದರಿ ಆದೇಶದ ಮೇರೆಗೆ ಕರ್ನಾಟಕ ಉಪಲೋಕಾಯುಕ್ತರು, ಲೋಕಾಯುಕ್ತ ಕಛೇರಿಯ ಉಪ ನಿಬಂಧಕರು, ವಿಚಾರಣೆಗಳು (4) ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಆದೇಶದಂತೆ ನೇಮಿಸಿರುತ್ತಾರೆ. ಅದರಂತೆ ವಿಚಾರಣಾಧಿಕಾರಿಯವರು ಈ ಪ್ರಕರಣದಲ್ಲಿ ಕೂಲಂಕಷವಾಗಿ ವಿಚಾರಣೆ ಜರುಗಿಸಿ ಆರೋಪಿತರೆಂದು ಹೇಳಲಾದ ಶ್ರೀ ಎ.ವಿ. ದಿವಾಕರ ಮತ್ತು ಶ್ರೀ ಕಲ್ಲೇಶಪ್ಪ ಇವರುಗಳ ವಿರುದ್ಧ ಹೊರಿಸಲಾದ ಆರೋಪಗಳು ಸಾಬೀತಾಗಿಲ್ಲವೆಂದು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ದಿನಾಂಕ: 30.9.02ರ ತಮ್ಮ ವಿಚಾರಣಾ ವರದಿಯಲ್ಲಿ ಅಭಿಪ್ರಾಯ ಪಟ್ಟಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಿರುವ ಗೌರವಾನ್ವಿತ ಕರ್ನಾಟಕ ಲೋಕಾಯುಕ್ತರು ಆರೋಪಿತರಿಬ್ಬರ ವಿರುದ್ಧದ ಆರೋಪಗಳು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಯವರು ತಮ್ಮ ವಿಚಾರಣಾ ವರದಿಯನ್ನು ಸಲ್ಲಿಸಿರುವ ಮೇರೆಗೆ ಇವರಿಬ್ಬರನ್ನು ಇವರುಗಳ ವಿರುದ್ಧದ ಆರೋಪಗಳಿಂದ ದೋಷಮುಕ್ತರನ್ನಾಗಿಸುವಂತೆ ಕ್ರಮ ಕೈಗೊಳ್ಳಬೇಕೆಂದು ಹಾಗೂ ಅಂತಹ ಕ್ರಮಕೈಗೊಂಡ ಬಗ್ಗೆ ಗೌರವಾನ್ವಿತ ಲೋಕಾಯುಕ್ತರು ಇವರಿಗೆ ಮಾಹಿತಿ ನೀಡಬೇಕೆಂದು ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ಅಪೇಕ್ಷಿಸಿರುತ್ತಾರೆ.

ವಿಚಾರಣಾಧಿಕಾರಿಗಳು, ವಿಚಾರಣಾ ವರದಿಯನ್ನು ಮತ್ತು ಅದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿದ ಸರ್ಕಾರವು ಆರೋಪಿತರಿಬ್ಬರ ವಿರುದ್ಧದ ಆರೋಪಗಳು ಸಾಬೀತಾಗಿಲ್ಲದಿರುವುದು ಸ್ಪಷ್ಟವಿರುವುದರಿಂದ ವಿಚಾರಣಾಧಿಕಾರಿಯವರ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಆರೋಪಿತರಿಬ್ಬರನ್ನು ಅವರುಗಳ ವಿರುದ್ಧ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 02 ಎಡಿಇ 2001, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಶ್ರೀ ಎ.ವಿ. ದಿವಾಕರ್, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಹಾಲಿ ಸೇವೆಯಿಂದ ಅಮಾನತ್ತಿನಲ್ಲಿರುವವರು ಹಾಗೂ ಶ್ರೀ ಕಲ್ಲೇಶಪ್ಪ, ಹಿಂದಿನ ಆಡಳಿತಾಧಿಕಾರಿ, ಬೊಮ್ಮನಹಳ್ಳಿ ಪಂಚಾಯಿತಿ, ಬೆಂಗಳೂರು ಹಾಲಿ ಶಿರಸ್ತೇದಾರ್ ಇವರುಗಳನ್ನು ಮೇಲೆ ಕ್ರಮ ಸಂಖ್ಯೆ(1) ರಲ್ಲಿ ಓದಲಾದ ದಿನಾಂಕ: 8.5.01ರ ಸರ್ಕಾರಿ ಆದೇಶದಲ್ಲಿ ಮಾಡಲಾದ ಆರೋಪಗಳಿಂದ ಮುಕ್ತರನ್ನಾಗಿಸಿ ಆದೇಶಿಸಿದೆ.

ಈ ಪ್ರಕರಣದ ಮಟ್ಟಿಗೆ ಇವರಿಬ್ಬರ ವಿರುದ್ಧ ಈ ಜಂಟಿ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರುಗಳು ಯಾವ ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1253 ಕಂದಾಯ ಇಲಾಖೆ (ಸೇವೆಗಳು-3).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ವಿ. ಆನಂದ್, ಜಂಟಿ ನಿರ್ದೇಶಕರು, (ಅಮಾನತ್ತಿನಲ್ಲಿ) ಮತ್ತು ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕಾ ವಿಸ್ತರಣಾ ಅಧಿಕಾರಿ (ಅಮಾನತ್ತಿನಲ್ಲಿ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಅಮಾನತ್ತಿನ ಅವಧಿಯನ್ನು ಮುಂದುವರಿಸಿರುವುದರಿಂದ ಜೀವನಾಧಾರ ಭತ್ಯೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಐ 40 ಐಸಿಎಸ್ 2002, ದಿನಾಂಕ: 09.01.2003.
2) ಸರ್ಕಾರದ ಆದೇಶ ಸಂಖ್ಯೆ: ಸಿಐ 40 ಐಸಿಎಸ್ 2002, ದಿನಾಂಕ: 09.01.2003.
3) ಕೈಗಾರಿಕಾಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರು, ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ, ಇವರ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ 2/209/2002-2003, ದಿನಾಂಕ: 26.07.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 09.01.2003ರಲ್ಲಿ ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಕೋರಮಂಗಲ ನ್ಯಾಷನಲ್ ಗೇಮ್ಸ್ ವಿಲೇಜ್‌ನಲ್ಲಿರುವ ಸರ್ಕಾರದ ವಸತಿಗೃಹವನ್ನು ಉಪ ಬಾಡಿಗೆ ನೀಡಿರುವ ಆರೋಪದ ಹಿನ್ನೆಲೆಯಲ್ಲಿ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 09.01.2003ರಲ್ಲಿ ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕೆ ವಿಸ್ತರಣಾ ಅಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಕೋರಮಂಗಲ ನ್ಯಾಷನಲ್ ಗೇಮ್ಸ್ ವಿಲೇಜ್‌ನ ಕೃಷ್ಣಾ ಬ್ಲಾಕ್‌ನ ಸಂಖ್ಯೆ: 120ರ ಸರ್ಕಾರದ ವಸತಿಗೃಹದಲ್ಲಿ ಅನಧಿಕೃತವಾಗಿ ವಾಸವಾಗಿರುವ ಆರೋಪದ ಮೇಲೆ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ: 26.07.2003ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಸದರಿ ಅಧಿಕಾರಿಗಳ ಅಮಾನತ್ತಿನ ಅವಧಿ 6 ತಿಂಗಳು ಮೀರಿರುವುದರಿಂದ ಅವರುಗಳಿಗೆ ಜೀವನಾಧಾರ ಭತ್ಯೆಯನ್ನು ಪಾವತಿಸಲು ಸರ್ಕಾರದ ಮಾರ್ಗದರ್ಶನ ಕೋರಿದ್ದರು. ಸರ್ಕಾರವು ಸದರಿ ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿ, 6 ತಿಂಗಳುಗಳ ನಂತರವೂ ಸದರಿ ಅಧಿಕಾರಿಗಳ ಅಮಾನತ್ತು ಮುಂದುವರಿದಿರುವುದರಿಂದ ಅವರ ಜೀವನಾಧಾರ ಭತ್ಯೆಯನ್ನು ಶೇಕಡಾ 50ರಂತೆಯೇ ಮುಂದುವರಿಸಲು ತೀರ್ಮಾನಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ವಾಕೈ 40 ಕೈಸೇವಿ 2002, (ಭಾಗ-3) ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯ ವಿವರಗಳ ಮೇರೆಗೆ ಸರ್ಕಾರವು ಶ್ರೀ ಎ. ಆನಂದ್, ಜಂಟಿ ನಿರ್ದೇಶಕರು, (ಅಮಾನತ್ತಿನಲ್ಲಿ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಮತ್ತು ಶ್ರೀಮತಿ ನಿಶಾತ್ ಆಯೇಷಾ, ಕೈಗಾರಿಕಾ ವಿಸ್ತರಣಾ ಅಧಿಕಾರಿ (ಅಮಾನತ್ತಿನಲ್ಲಿ) ಅವರುಗಳ ಅಮಾನತ್ತನ್ನು 6 ತಿಂಗಳ ನಂತರವೂ ಮುಂದುವರಿಸಿರುವುದರಿಂದ ಇವರಿಗೆ ಜೀವನಾಧಾರ ಭತ್ಯೆಯನ್ನು ಶೇಕಡಾ 50 ರಂತೆಯೇ ಮುಂದುವರಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.1996ರಲ್ಲಿ ಸರ್ಕಾರವು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲ್ಪಟ್ಟಿರುವ ಆರ್ಥಿಕ ಅಧಿಕಾರದಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1255 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಕೈಗಾರಿಕಾ ಸೇವೆಗಳು).

## ಶಿಕ್ಷಣ ಸಚಿವಾಲಯ

**ವಿಷಯ:** ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಅಧೀಕ್ಷಕರು: ವಾರ್ಡನ್‌ಗಳ ಹುದ್ದೆಗಳನ್ನು ತುಂಬಲು ವೃಂದ ಮತ್ತು ನೇಮಕಾತಿ ನಿಯಮಾವಳಿಗಳನ್ನು ಮಾರ್ಪಡಿಸಿ ಕಾರ್ಯಕಾರಿ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:**
1) ವೃಂದ ಮತ್ತು ನೇಮಕಾತಿ ನಿಯಮಾವಳಿಗಳ ಪುನರ್‌ವಿಲೋಕನೆಗಾಗಿ ಸರ್ಕಾರದ ಕಾರ್ಯದರ್ಶಿಗಳು (ಉನ್ನತ ಶಿಕ್ಷಣ) ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 04.02.2003ರಂದು ಜರುಗಿದ ಸಭೆಯ ನಡವಳಿಗಳು.
2) ಕಾಲೇಜು ಶಿಕ್ಷಣ ಆಯುಕ್ತರ ಅರೆ ಸರ್ಕಾರಿ ಪತ್ರ ಸಂಖ್ಯೆ: ಕಾಶಿಇ-ಆಆಶಾ-44-2003 ದಿನಾಂಕ: 08.09.2003

**ಪ್ರಸ್ತಾವನೆ:**

ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಹಾಲಿ ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಾವಳಿಗಳು, 1964ರ ಅನುಸಾರ ಅಧೀಕ್ಷಕರು: ವಾರ್ಡನ್‌ಗಳ ಹುದ್ದೆಗಳನ್ನು ಶೇಕಡ 100ರಷ್ಟು ಪ್ರಥಮ ದರ್ಜೆ ಸಹಾಯಕರ ವೃಂದದಿಂದ ಜ್ಯೇಷ್ಠತೆ ಆಧಾರದ ಮೇಲೆ ಮುಂಬಡ್ತಿ ಮೂಲಕ ಬಡ್ತಿಯಿಂದ ತುಂಬಲಾಗುತ್ತಿತ್ತು. ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಗಳ ಪುನರ್‌ವಿಲೋಕನೆಗಾಗಿ ಮೇಲೆ ಉಲ್ಲೇಖ(1)ರಲ್ಲಿ ಓದಲಾದ ದಿನಾಂಕ:04.02.2003ರಂದು ಜರುಗಿದ ಸಭೆಯಲ್ಲಿ ಅಧೀಕ್ಷಕರು: ವಾರ್ಡನ್‌ಗಳ ಹುದ್ದೆಗಳಿಗೆ ಪ್ರಥಮ

ದರ್ಜೆ ಸಹಾಯಕರ ವೃಂದದಿಂದ ಮತ್ತು ಶೀಘ್ರಲಿಪಿಗಾರರ ವೃಂದದಿಂದ 18:1ರ ಅನುಪಾತದಲ್ಲಿ ಅಂದರೆ ಪ್ರತಿ 19ನೇ ಖಾಲಿ ಹುದ್ದೆಯನ್ನು ಶೀಘ್ರಲಿಪಿಗಾರರ ವೃಂದದಿಂದ ಭರ್ತಿ ಮಾಡತಕ್ಕದೆಂದು ನಿರ್ಣಯ ಕೈಗೊಳ್ಳಲಾಗಿದೆ. ಈ ರೀತಿ ನಿರ್ಣಯ ತೆಗೆದುಕೊಂಡ ದಿನಾಂಕ: 04.02.2003ರ ಸಭೆಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸಹ ಕಾರ್ಯದರ್ಶಿಗಳು ಮತ್ತು ಆರ್ಥಿಕ ಇಲಾಖೆಯ ಅಧೀನ ಕಾರ್ಯದರ್ಶಿಗಳು ಸಹ ಉಪಸ್ಥಿತರಿದ್ದರು.

ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಗಳ ತಿದ್ದುಪಡಿ ಪ್ರಕ್ರಿಯೆ ಪರಿಶೀಲನೆಯಲ್ಲಿದ್ದು, ಮೇಲೆ ಹೇಳಲಾದ ತೀರ್ಮಾನಗಳನ್ನು ಅಳವಡಿಸಿ ತಿದ್ದುಪಡಿ ಮಾಡಿ ಪರಿಷ್ಕೃತ ನಿಯಮಾವಳಿಗಳನ್ನು ಹೊರಡಿಸಲು ಹೆಚ್ಚಿನ ಕಾಲಾವಕಾಶ ತೆಗೆದುಕೊಳ್ಳುವುದರಿಂದ, ಅಧೀಕ್ಷಕರು: ವಾರ್ಡನ್‌ಗಳ ಹುದ್ದೆಗಳನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ತುರ್ತಾಗಿ ತುಂಬಬೇಕಾಗಿರುವುದು ಅವಶ್ಯಕತೆಯಿದೆಯೆಂತಲೂ, ಈ ರೀತಿ ಖಾಲಿ ಹುದ್ದೆಗಳನ್ನು ತುಂಬುವಾಗ ಅಧೀಕ್ಷಕರು: ವಾರ್ಡನ್ ಹುದ್ದೆಗಳಿಗೆ ಮುಂಬಡ್ತಿ ಮೂಲಕ ಪ್ರಥಮ ದರ್ಜೆ ಸಹಾಯಕರ ವೃಂದದಿಂದ ಮತ್ತು ಶೀಘ್ರಲಿಗಾರರ ವೃಂದದಿಂದ 18:1ರ ಅನುಪಾತದಲ್ಲಿ ಮೀಸಲಾತಿಗೆ ಒಳಪಡಿಸಿ ಸೂಕ್ತ ಕಾರ್ಯಕಾರಿ ಆದೇಶವನ್ನು ದೊರಕಿಸಿಕೊಡುವಂತೆ ಮೇಲೆ ಉಲ್ಲೇಖ(2)ರಲ್ಲಿ ಓದಲಾದ ದಿನಾಂಕ:05.09.2003ರ ಅರೆಸರ್ಕಾರಿ ಪತ್ರದಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ:04.02.2003ರಂದು ಪುನರ್‌ವಿಲೋಕನಾ ಸಭೆಯು ತೆಗೆದುಕೊಂಡ ನಡವಳಿಗಳು ಹಾಗೂ ದಿನಾಂಕ: 05.09.2003ರಂದು ಕಾಲೇಜು ಶಿಕ್ಷಣ ಆಯುಕ್ತರು ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 174 ಯುಇಸಿ 2001, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್, 2003**

ಮೇಲೆ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಕಾಲೇಜು ಶಿಕ್ಷಣ ಇಲಾಖೆಯ 1964ರ ವೃಂದ ಮತ್ತು ನೇಮಕಾತಿ ನಿಯಮಾವಳಿಗಳಿಗೆ ತಿದ್ದುಪಡಿ ಮಾಡುವುದನ್ನು ಕಾಯ್ದಿರಿಸಿ ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಖಾಲಿ ಇರುವ ರೂ. 5200-9580ರ ವೇತನ ಶ್ರೇಣಿಯ ಅಧೀಕ್ಷಕರು: ವಾರ್ಡನ್ ಹುದ್ದೆಗಳಿಗೆ ಮೀಸಲಾತಿ ಪದ್ಧತಿಗೆ ಒಳಪಡಿಸಿ ಈ ಕೆಳಕಂಡಂತೆ ನೇಮಕಾತಿ ವಿಧಾನವನ್ನು ರೂಪಿಸಿ ಆದೇಶಿಸಲಾಗಿದೆ.

| | | |
|---|---|---|
| 1. | ಅಧೀಕ್ಷಕರು / ವಾರ್ಡನ್<br>ವೇತನ ಶ್ರೇಣಿ ರೂ. 5200-9580 | ಪ್ರಥಮ ದರ್ಜೆ ಸಹಾಯಕರ ಮತ್ತು ಶೀಘ್ರಲಿಪಿಗಾರರ ವೃಂದದಿಂದ 18:1ರ ಅನುಪಾತದಲ್ಲಿ ಪದೋನ್ನತಿ ಮೂಲಕ, ಪ್ರತಿ 19ನೇ ಖಾಲಿ ಹುದ್ದೆಯನ್ನು ಶೀಘ್ರಲಿಪಿಗಾರರ ವೃಂದದಿಂದ ಮುಂಬಡ್ತಿ ಮೂಲಕ ತುಂಬತಕ್ಕದ್ದು. ಶೀಘ್ರಲಿಪಿಗಾರರ ವೃಂದದಿಂದ ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದ ಸಂದರ್ಭಗಳಲ್ಲಿ ಪ್ರಥಮ ದರ್ಜೆ ಸಹಾಯಕರ ವೃಂದದಿಂದ ಮುಂಬಡ್ತಿ ಮೂಲಕ ತುಂಬತಕ್ಕದ್ದು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಸರ್ಕಾರದ ಉಪ ಕಾರ್ಯದರ್ಶಿ-4,

ಪಿ.ಆರ್. 1256 ಶಿಕ್ಷಣ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಕರ್ನಾಟಕ ಸಮುದಾಯ ಆಧಾರಿತ ನಿರ್ವಹಣೆ ಯೋಜನೆಗೆ 2003-04ನೇ ಸಾಲಿಗೆ ಮೊದಲನೆಯ ಕಂತಿನ ಹಣವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕಾರ್ಯನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ: ಸನಿಇ:ಜಸಂಯೋ:ಏಸಿಟಿ:68:2003, ದಿನಾಂಕ: 21.07.2003.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:21.07.03ರ ಪತ್ರದಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು, ಜಲಸಂವರ್ಧನೆ ಯೋಜನಾ ಸಂಘ ರವರು ಕರ್ನಾಟಕ ಸರ್ಕಾರವು ವಿಶ್ವಬ್ಯಾಂಕಿನೊಂದಿಗೆ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯ ಯೋಜನಾ ಕರಾರು ಪತ್ರಕ್ಕೆ ದಿನಾಂಕ:04.06.2002 ರಂದು ಸಹಿ ಹಾಕಿದ ನಂತರ ದಿನಾಂಕ:08.07.2002 ರಿಂದ ಯೋಜನೆಯು ಪ್ರಯೋಜನೀಯವಾಗಿದ್ದು, ಮೊದಲನೆಯ ವರ್ಷದ ಯೋಜನಾ ಅವಧಿಯು ದಿನಾಂಕ: 07.07.2003ಕ್ಕೆ ಮುಗಿದಿರುತ್ತದೆ. ಈ ಅವಧಿಯಲ್ಲಿ ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾಧಿಸಿದ ಪ್ರಗತಿ ವರದಿಯನ್ನು ಸಲ್ಲಿಸಿ ಈ ಸಂಘವು ಅಸ್ತಿತ್ವಕ್ಕೆ ಬಂದಾಗಿನಿಂದ (2000-2001ನೇ ಸಾಲಿನಿಂದ) ಸರ್ಕಾರದಿಂದ ಬಿಡುಗಡೆಯಾದ ಹಣ, ಬಡ್ಡಿ ಹಾಗೂ ಇತರೆಗಳಿಂದ ಬಂದಿರುವ ಹಣ ಹಾಗೂ ದಿನಾಂಕ:30.6.2003ರವರೆಗಿನ ವರ್ಷವಾರು ಮಾಡಿದ ವೆಚ್ಚದ ವಿವರಗಳನ್ನು ಸಲ್ಲಿಸಿದ್ದು, ವಿವರಗಳು ಈ ಕೆಳಕಂಡಂತಿದೆ.

(ಲಕ್ಷ ರೂ.ಗಳಲ್ಲಿ)

| ವರ್ಷ | ವಾರ್ಷಿಕ ಅನುದಾನ | ಸರ್ಕಾರದಿಂದ ಬಿಡುಗಡೆಯಾದ ಹಣ | ಇತರೆ ಸ್ವೀಕೃತಿಗಳು | ಮಾಡಲಾದ ವೆಚ್ಚ | ಉಳಿಕೆ |
|---|---|---|---|---|---|
| 2000-2001 | 222.00 | 125.00 | - | 67.33 | 57.67 |
| 2001-2002 | 1000.00 | 325.00 | 1.64 | 281.53 | 102.78 |
| 2002-2003 | 4124.00 | 1488.03 | 6.51 | 967.30 | 630.00 |
| 2003-2004 | 11350.00 | - | - | 209.33 | 420.70 |

ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯ ಕಾರ್ಯಚಟುವಟಿಕೆಗಾಗಿ 2003-04ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4702-0-101-2-80 ರಡಿ ಕೆಳಕಂಡಂತೆ ನೀಡಿರುವ ಅನುದಾನ ವಿವರಗಳು ಕೆಳಕಂಡಂತಿದೆ.

4702-00-101-2-80-

| | |
|---|---|
| 141 ಕಾಮಗಾರಿಗಳು | ರೂ. 9580.76 ಲಕ್ಷಗಳು |
| 422 ವಿಶೇಷ ಘಟಕ ಯೋಜನೆ | ರೂ. 1453.40 ಲಕ್ಷಗಳು |
| 423 ಗಿರಿಜನ ಉಪ ಯೋಜನೆ | ರೂ. 315.84 ಲಕ್ಷಗಳು |
| **ಒಟ್ಟು** | **ರೂ. 11350.00 ಲಕ್ಷಗಳು** |

ಕಾರ್ಯನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘ ರವರು 2003-04ನೇ ಸಾಲಿನಲ್ಲಿ ಈ ಸಂಘದ ಕಾರ್ಯಚಟುವಟಿಕೆಗಳಿಗೆ ಮೊದಲನೇ ಅರ್ಧ ವಾರ್ಷಿಕಕ್ಕೆ ವಿವಿಧ ಕಾರ್ಯಕ್ರಮದ ಅಡಿಯಲ್ಲಿ ಮಾಡಲು ಉದ್ದೇಶಿಸಿರುವ ವೆಚ್ಚದ ವಿವರಗಳು ಕೆಳಕಂಡಂತಿದೆ.

| ಕ್ರ. ಸಂ. | ಉದ್ದೇಶಿತ ವೆಚ್ಚದ ವಿವರ | ಬೇಕಾಗಿರುವ ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|
| 1. | ಟ್ಯಾಂಕ್ ಪದ್ಧತಿ ಉಪಯೋಜನೆ | 1000.00 |
| 2. | ಸರಕು ಮತ್ತು ಸಾಮಗ್ರಿಗಳು (ಗೂಡ್ಸ್ ಅಂಡ್ ಇಕ್ವ್ಯೂಸ್‌ಮೆಂಟ್) | 50.00 |
| 3. | ಸಲಹಾ ಸಂಭಾವನೆಗಳು | 65.00 |
| 4. | ಸರ್ಕಾರೇತರ ಸಂಸ್ಥೆಗಳು, ಶಿಕ್ಷಣ ಹಾಗೂ ಸಂಶೋಧನಾ ಸಂಸ್ಥೆಗಳು | 267.00 |
| 5. | ತರಬೇತಿ, ಕಾರ್ಯಾಗಾರ ಹಾಗೂ ಶೈಕ್ಷಣಿಕ ಪ್ರವಾಸಗಳು | 100.00 |
| 6. | ವೇತನಗಳು | 50.00 |
| 7. | ಕಾರ್ಯಚರಣೆಯ ಕೆಲಸಗಳು (ಆಪರೇಷನ್ ಅಂಡ್ ಮೆಂಟೆನೆನ್ಸ್) | 30.00 |
| | **ಒಟ್ಟು** | **1562.00** |

ಮೇಲಿನ ಉದ್ದೇಶಿತ ವೆಚ್ಚಕ್ಕಾಗಿ 2003-04ನೇ ಸಾಲಿಗೆ ಮೊದಲನೇ ಕಂತಾಗಿ 1562.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡುವಂತೆ ಕಾರ್ಯನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘ ಇವರು ಕೋರುತ್ತಾ ಈ ವರ್ಷದಲ್ಲಿ ಗರಿಷ್ಠ ಪ್ರಮಾಣದ ಪ್ರಗತಿಯನ್ನು ಸಾಧಿಸಲು ಉದ್ದೇಶಿಸಲಾಗಿದೆ ಎಂಬುದಾಗಿ ತಿಳಿಸಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಜಸಂಇ 01 ಜಸಂಯೋ 2002, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ಜಲ ಸಂವರ್ಧನೆ ಯೋಜನಾ ಸಂಘವು ಉದ್ದೇಶಿತ ಯೋಜನೆಗಳನ್ನು ಕಾರ್ಯಗತಗೊಳಿಸುವ ಸಲುವಾಗಿ 2003-04ನೇ ಸಾಲಿಗೆ ಲೆಕ್ಕ ಶೀರ್ಷಿಕೆ "4702-00-101-2-80-141 (ಯೋಜನೆ)" ಅಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಮೊದಲನೇ ಕಂತಾಗಿ ರೂ. 1562.00 ಲಕ್ಷಗಳನ್ನು (ಒಂದು ಸಾವಿರದ ಐದುನೂರ ಅರವತ್ತೆರಡು ಲಕ್ಷ ರೂಪಾಯಿಗಳನ್ನು ಮಾತ್ರ) ಬಿಡುಗಡೆ ಮಾಡಿದೆ.

ಕಾರ್ಯನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘ, ಬೆಂಗಳೂರು ರವರು ಸಲ್ಲಿಸುವ ಹಣ ಸಂದಾಯ ಸ್ವೀಕೃತಿಯ ಮೇಲೆ ಮೇಲುರುಜು ಮಾಡಲು ವಿಶೇಷ ಕರ್ತವ್ಯಾಧಿಕಾರಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಇವರಿಗೆ ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 05.09.2003ರ ಟಿಪ್ಪಣಿ ಸಂಖ್ಯೆ: ಲೋಇ 757 ಆಕೋ-1/2003ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಜಿ. ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1257 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಸೈನಿಕ ಮಂಡಳಿ ಪುನರ್ರಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 89 ಕಸೈಸೇ 2000, ದಿನಾಂಕ: 21.12.2000.

2) ನಿರ್ದೇಶಕರು ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸೈಕಪುಇ:ಆರ್‌ಎಸ್‌ಬಿ 23 ಆರ್‌ಬಿಎಸ್ 2003, ದಿನಾಂಕ: 15.07.2003ಕ್ಕೆ ಪತ್ರ ವ್ಯವಹಾರ ಕೊನೆಗೊಂಡಂತೆ.

**ಪ್ರಸ್ತಾವನೆ:**

ಸರ್ಕಾರದ ಆದೇಶ ದಿನಾಂಕ: 21.12.2000ರಲ್ಲಿ ಓದಲಾಗಿರುವ ಕ್ರಮ ಸಂಖ್ಯೆ: (1)ರಲ್ಲಿ ಕರ್ನಾಟಕ ರಾಜ್ಯ ಸೈನಿಕ ಮಂಡಳಿಯನ್ನು 3 ವರ್ಷಗಳ ಅವಧಿಗೆ ರಚಿಸಲಾಗಿತ್ತು. ಸದರಿ ಮಂಡಳಿಯ ಅವಧಿಯ ದಿನಾಂಕ: 17ನೇ ಆಗಸ್ಟ್ 2003ಕ್ಕೆ ಮುಕ್ತಾಯಗೊಂಡಿರುತ್ತದೆ. ಆದ್ದರಿಂದ ನಿರ್ದೇಶಕರು ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಇವರ ಪತ್ರ ದಿನಾಂಕ: 15ನೇ ಜುಲೈ

2003 ಓದಲಾಗಿರುವ ಕ್ರಮ ಸಂಖ್ಯೆ (2)ರಲ್ಲಿ ಕೇಂದ್ರಿಯ ಸೈನಿಕ ಮಂಡಳಿ ಭಾರತ ಸರ್ಕಾರ ರಕ್ಷಣಾ ಇಲಾಖೆ ನವದೆಹಲಿ ಇವರ ಮಾರ್ಗಸೂಚಿಯಲ್ಲಿರುವಂತೆ ಕರ್ನಾಟಕ ರಾಜ್ಯ ಸೈನಿಕ ಮಂಡಳಿಯನ್ನು ಪುನಃ 3 ವರ್ಷಗಳ ಅವಧಿಗೆ ರಚಿಸುವಂತೆ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ನಿರ್ದೇಶಕರು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 92 ಕಸ್ಸೆಸೇ 2003, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್, 2003**

ಕರ್ನಾಟಕ ರಾಜ್ಯ ಸೈನಿಕ ಮಂಡಳಿಯನ್ನು ಪುರ್ನರಚಿಸಲು ಈ ಕೆಳಕಂಡ ವ್ಯಕ್ತಿಗಳನ್ನು 3 ವರ್ಷಗಳ ಅವಧಿಗೆ ದಿನಾಂಕ: 18.08.2003 ರಿಂದ ಜಾರಿಗೆ ಬರುವಂತೆ ನೇಮಿಸಿದೆ.

| | | |
|---|---|---|
| 1) | ಮುಖ್ಯ ಮಂತ್ರಿಗಳು | ಅಧ್ಯಕ್ಷರು |
| 2) | ಸೈನಿಕ ಕಲ್ಯಾಣ ಇಲಾಖೆಗೆ ಸಂಬಂಧಪಟ್ಟ ಮಂತ್ರಿಗಳು | ಹಿರಿಯ ಉಪಾಧ್ಯಕ್ಷರು |
| 3) | ದಿ ಜನರಲ್ ಆಫೀಸರ್ ಕಮ್ಯಾಂಡಿಂಗ್ ಇನ್ ಚೀಫ್ ಸದರನ್ ಕಮ್ಯಾಂಡ್ ಪುಣೆ | ಉಪಾಧ್ಯಕ್ಷರು |
| 4) | ದಿ ಏರ್ ಆಫೀಸರ್ ಕಮ್ಯಾಂಡಿಂಗ್ ಇನ್ ಚೀಫ್ ಟ್ರೈನಿಂಗ್ ಕಮ್ಯಾಂಡ್ ಐಎಎಫ್, ಬೆಂಗಳೂರು | ಉಪಾಧ್ಯಕ್ಷರು |
| 5) | ದಿ ಫ್ಲಾಗ್ ಆಫೀಸರ್ ಕಮ್ಯಾಂಡಿಂಗ್ ಇನ್ ಚೀಫ್ ಸದರನ್ ನಾವೆಲ್ ಕಾಮ್ಯಾಂಡ್ ಕೊಚ್ಚಿನ್ | ಉಪಾಧ್ಯಕ್ಷರು |
| 6) | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಒಳಾಡಳಿತ ಮತ್ತು ಸಾರಿಗೆ ಇಲಾಖೆ | ಪದನಿಮಿತ್ತ ಸದಸ್ಯರು |
| 7) | ಸರ್ಕಾರದ ಪ್ರಧಾನ ಕಾರ್ಯದರ್ಶಿ ಕಂದಾಯ ಇಲಾಖೆ | ಪದನಿಮಿತ್ತ ಸದಸ್ಯರು |
| 8) | ಸರ್ಕಾರದ ಪ್ರಧಾನ ಕಾರ್ಯದರ್ಶಿ ಶಿಕ್ಷಣ ಇಲಾಖೆ | ಪದನಿಮಿತ್ತ ಸದಸ್ಯರು |
| 9) | ಸರ್ಕಾರದ ಪ್ರಧಾನ ಕಾರ್ಯದರ್ಶಿ ನಗರಾಭಿವೃದ್ಧಿ ಇಲಾಖೆ | ಪದನಿಮಿತ್ತ ಸದಸ್ಯರು |
| 10) | ಕಾರ್ಯದರ್ಶಿ (ಪಿಸಿಎಎಸ್) ಒಳಾಡಳಿತ ಮತ್ತು ಸಾರಿಗೆ ಇಲಾಖೆ | ಪದನಿಮಿತ್ತ ಸದಸ್ಯರು |
| 11) | ಸರ್ಕಾರದ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. | ಪದನಿಮಿತ್ತ ಸದಸ್ಯರು |
| 12) | ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಬೆಂಗಳೂರು. | ಪದನಿಮಿತ್ತ ಸದಸ್ಯರು |
| 13) | ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ, ಬೆಂಗಳೂರು. | ಪದನಿಮಿತ್ತ ಸದಸ್ಯರು |
| 14) | ಕಮ್ಯಾಂಡರ್ ಕರ್ನಾಟಕ ಕೇರಳ, ಗೋವ, ಸಬ್‌ಏರಿಯಾ, ಬೆಂಗಳೂರು. | ಪದನಿಮಿತ್ತ ಸದಸ್ಯರು |
| 15) | ಏರ್ ಆಫೀಸರ್ ಕಮ್ಯಾಂಡಿಂಗ್ ಏರ್‌ಫೋರ್ಸ್ ಸ್ಟೇಶನ್ ಜಾಲಹಳ್ಳಿ, ಬೆಂಗಳೂರು. | ಪದನಿಮಿತ್ತ ಸದಸ್ಯರು |
| 16) | ನಿರ್ದೇಶಕರು, ಪುನರ್ವಸತಿ ಸದರನ್ ಜೋನ್ ಹೆಚ್‌ಕ್ಯೂ ಸದರನ್ ಕಮ್ಯಾಂಡ್, ಪುಣೆ. | ಪದನಿಮಿತ್ತ ಸದಸ್ಯರು |
| 17) | ಡೆಪ್ಯೂಟಿ ಡೈರಕ್ಟರ್ ಜನರಲ್ ರೆಕ್ರ್ಯೂರಿಟಿಂಗ್ ಹೆಚ್‌ಕ್ಯೂ ಜೋನ್ ರೆಕ್ರ್ಯೂರಿಟಿಂಗ್ ಆಫೀಸ್, ಬೆಂಗಳೂರು. | ಪದನಿಮಿತ್ತ ಸದಸ್ಯರು |
| 18) | ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು. | ಕಾರ್ಯದರ್ಶಿ. |

**ಅಧಿಕಾರೇತರ ಸದಸ್ಯರು**

1) ಲೆಫ್ಟಿನೆಂಟ್ ಜನರಲ್ ಎನ್.ಎಸ್. ನರಹರಿ, ಪಿವಿಎಸ್‌ಎಂ (ನಿವೃತ್ತ)
2) ಏರ್‌ಮಾರ್ಷಲ್ ಕೆ.ಸಿ. ಕರಿಯಪ್ಪ, ಪಿವಿಎಸ್‌ಎಂ, ವಿಎಮ್ (ನಿವೃತ್ತ)
3) ಲೆಫ್ಟಿನೆಂಟ್ ಜನರಲ್ ಸರ್‌ದೇಶಪಾಂಡೆ ಯುವೈಎಸ್‌ಎಂ, ಎವಿಎಸ್‌ಎಂ (ನಿವೃತ್ತ)
4) ಲೆಫ್ಟಿನೆಂಟ್ ಕೇನಲ್ ಬಸಪ್ಪಕೀರನಾಗಿ (ನಿವೃತ್ತ)

ಕೇನಲ್ ಬಸಪ್ಪ ಕೀರನಾಗಿ (ನಿವೃತ್ತ) ಇವರ ಜಾಗದಲ್ಲಿ ಹೊಸದಾಗಿ ಕೇನಲ್ ಕೆ.ಸಿ. ಐಯಣ್ಣ ಇವರನ್ನು ಮಂಡಳಿಯ ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯ ಸೈನಿಕ ಮಂಡಳಿಯ ಅಧಿಕಾರೇತರ ಸದಸ್ಯರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮದಲ್ಲಿ ವರ್ಗೀಕರಿಸಿರುವ ಅನುಬಂಧ-ಎ ನಲ್ಲಿರುವಂತೆ ಪ್ರಯಾಣ ಭತ್ಯೆ ಮತ್ತು ತುಟ್ಟಿಭತ್ಯೆಗೆ ಅರ್ಹರಿರುತ್ತಾರೆ.

ಸಮಿತಿಯ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ 2235-60-200-01 ಮತ್ತು 2-01ರಲ್ಲಿ ಬಿಡುಗಡೆ ಮಾಡಿರುವ ಅನುದಾನದಲ್ಲಿ ಮತ್ತು ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯ ವೆಚ್ಚಗಳು ಮತ್ತು ಪ್ರಯಾಣ ಖರ್ಚುಗಳನ್ನು ಚಾಲ್ತಿಯಲ್ಲಿರುವ ಮತ್ತು ತರುವಾಯ ವರ್ಷದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ಸಣ್ಣಲಿಂಗಣ್ಣವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು).

ಪಿ.ಆರ್. 1258

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಬಿ. ದಯಾನಂದ, ಮುಖ್ಯ ಇಂಜಿನಿಯರ್, ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಕ್ರಮಾಂಕ: ಸಿಆಸುಇ 103 ಎಸ್‌ಇಎನ್ 2002, ದಿನಾಂಕ: 9.10.2002.

2) ಶ್ರೀ ಬಿ. ದಯಾನಂದ ಮುಖ್ಯ ಇಂಜಿನಿಯರ್ ಅವರ ಉತ್ತರ ದಿನಾಂಕ: 11.11.2002.

**ಪ್ರಸ್ತಾವನೆ:**

ಚನ್ನರಾಯಪಟ್ಟಣ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ಕಾರ್ಯಪಾಲಕ ಇಂಜಿನಿಯರ್ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಜಿಲ್ಲಾ ಪಂಚಾಯತ್ ಕಾಮಗಾರಿಗಳಿಗಾಗಿ ಸಿಮೆಂಟ್ ಸರಬರಾಜು ಮಾಡಲು ಖಾಸಗಿ ಕಂಪನಿಯಾದ ಬೆಂಗಳೂರಿನ ಮೆ: ಶಿವ ಮಿನರಲ್ಸ್ ಅಂಡ್ ಸಿಮೆಂಟ್ ಕಂಪನಿಗೆ ರೂ. 1,80,435 ಗಳನ್ನು ಮುಂಗಡವಾಗಿ ನೀಡಿ ಯಾವುದೇ ಕರಾರನ್ನು ಮಾಡಿಕೊಳ್ಳದೇ ಸದರಿ ಕಂಪನಿಯು ಸರಿಯಾಗಿ ಸಿಮೆಂಟ್ ಸರಬರಾಜು ಮಾಡದೆ ಜಿಲ್ಲಾ ಪಂಚಾಯತ್‌ಗೆ ತಾತ್ಕಾಲಿಕವಾಗಿ ನಷ್ಟ ಉಂಟು ಮಾಡಿದ ಆರೋಪಕ್ಕಾಗಿ ಶ್ರೀ ಬಿ. ದಯಾನಂದ, ಮುಖ್ಯ ಇಂಜಿನಿಯರ್ ರವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 9.10.2002ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿಯನ್ನು ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 11.11.2002ರ ಉತ್ತರ ಸಲ್ಲಿಸಿದ ಆರೋಪಿತರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆರೋಪಿತ ಅಧಿಕಾರಿಯ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಅದು ಮನಗಾಣಿಸುವ ರೀತಿಯಲ್ಲಿಲ್ಲದಿರುವುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ದೃಷ್ಟಿಯಿಂದ ಆರೋಪಿತರ ಮೇಲಿನ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 103 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ. ದಯಾನಂದ್ ಮುಖ್ಯ ಇಂಜಿನಿಯರ್, ಅವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸಲು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು 5,000 ರೂಪಾಯಿಗಳ ಗೌರವಧನ ಪಡೆಯುವರು ಹಾಗೂ ಸರ್ಕಾರಿ ಆದೇಶ ಕ್ರಮಾಂಕ:ಸಿಆಸುಇ 10 ಸೇಇವಿ 2001, ದಿನಾಂಕ: 4.3.2002ರಲ್ಲಿ ನಿಗದಿಪಡಿಸಿರುವಂತೆ ವಾಹನ ಭತ್ಯೆ ಪಡೆಯುತ್ತಾರೆ. ವಿಚಾರಣೆಯನ್ನು 3 ತಿಂಗಳ ಒಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎ. ಹೊನ್ನಪ್ಪ ನಾಯಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ (ಸೇವೆಗಳು-ಎ) ಶಾಖೆ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್. 1259

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಬಿ.ವೈ. ನಾಯಕ್, ಕ್ಷೇತ್ರ ಶಿಕ್ಷಣಾಧಿಕಾರಿ, ರಾಮದುರ್ಗ, ತಾಲ್ಲೂಕ್, ಬೆಳಗಾವಿ ಜಿಲ್ಲೆ ಇವರ ಮೇಲೆ ಮುರಗೋಡ ಪೊಲೀಸ್ ಠಾಣೆಯಲ್ಲಿ ಅಪರಾಧ ಸಂಖ್ಯೆ: 119:2002ರಲ್ಲಿ ಪ್ರಕರಣ ದಾಖಲಿಸಿ, ಬಂಧಿಸಿ, ಬಿಡುಗಡೆ ಮಾಡಿರುವ ಹಿನ್ನಲೆಯಲ್ಲಿ-ಕ್ರಮ.

**ಓದಲಾಗಿದೆ:** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಕಚೇರಿಯ ದಿನಾಂಕ: 28.12.2002ರ ಪತ್ರ ಸಂಖ್ಯೆ: ಸಿ2(4) ದೂರು:62:2002-03.

**ಪ್ರಸ್ತಾವನೆ:**

ಶ್ರೀ ಬಿ.ವೈ. ನಾಯಕ್, ಕ್ಷೇತ್ರ ಶಿಕ್ಷಣಾಧಿಕಾರಿ, ರಾಮದುರ್ಗ ತಾಲ್ಲೂಕ್, ಬೆಳಗಾವಿ ದಕ್ಷಿಣ, ಇವರ ವಿರುದ್ಧ ಭಾರತೀಯ ದಂಡ ಸಂಹಿತೆಯ ಕಲಂ 367, 109, 506 ಹಾಗೂ 34ರನ್ವಯ ಮುರಗೊಡು ಪೊಲೀಸ್ ಠಾಣೆಯಲ್ಲಿ ಅಪರಾದ ಸಂಖ್ಯೆ:119:2002ರಲ್ಲಿ ದಾಖಲಾಗಿರುವುದಾಗಿಯೂ ಮತ್ತು ಸದರಿಯವರನ್ನು ದಸ್ತಗಿರಿ ಮಾಡಿ ದಿನಾಂಕ: 13.12.2002ರಂದು ಸಂಜೆ 6.00 ಗಂಟೆಯಿಂದ ದಿನಾಂಕ: 16.12.2002ರವರೆಗೆ ನ್ಯಾಯಾಂಗ ಬಂಧನದಲ್ಲಿಡಲಾಗಿತ್ತೆಂದು ಬೆಳಗಾಂ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರು ವರದಿ ಮಾಡಿದ್ದರಿಂದ, ಶ್ರೀ ಬಿ.ವೈ. ನಾಯಕ್ ಇವರು ಕ್ರಿಮಿನಲ್ ಕೇಸ್ ನಲ್ಲಿ 48 ಗಂಟೆಗಳಿಗೂ ಹೆಚ್ಚಿನ ಅವಧಿಯಲ್ಲಿ ದಸ್ತಗಿರಿಯಲ್ಲಿದ್ದರಿಂದ ಸದರಿಯವರನ್ನು ವಿಚಾರಣೆ ಕಾಯ್ದಿರಿಸಿ, ದಿನಾಂಕ:13.12.2002ರಿಂದ ಪೂರ್ವಾನ್ವಯವಾಗಿ ಸೇವೆಯಿಂದ ಅಮಾನತ್ತುಗೊಳಿಸಲು ಮೇಲೆ ಓದಲಾದ ದಿನಾಂಕ: 28.12.2002ರ ಪ್ರಸ್ತಾವನೆಯ ಮೂಲಕ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಶ್ರೀ ಬಿ.ವೈ. ನಾಯಕ್ ಇವರು ದಸ್ತಗಿರಿಯಾಗಿದ್ದ ಅವಧಿಗೆ ಅಂದರೆ ದಿನಾಂಕ: 13.12.2002ರಿಂದ ದಸ್ತಗಿರಿಯಾಗಿದ್ದ ಪೂರ್ಣ ಅವಧಿಗೆ ಅವರನ್ನು ವಿಚಾರಣೆ ಕಾಯ್ದಿರಿಸಿ ಅಮಾನತ್ತಿನಲ್ಲಿಡುವುದು ಸೂಕ್ತವೆಂದು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 220 ಡಿಜಿಡಿ 2002, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಬಿ.ವೈ. ನಾಯಕ್, ಕ್ಷೇತ್ರ ಶಿಕ್ಷಣಾಧಿಕಾರಿ, ರಾಮದುರ್ಗ ತಾಲ್ಲೂಕ್, ಬೆಳಗಾವಿ ದಕ್ಷಿಣ, ಬೆಳಗಾಂ ಜಿಲ್ಲೆ, ಇವರು ದಿನಾಂಕ: 13.12.2002 ರಿಂದ 16.12.2002 ರವರೆಗೆ ಪೊಲೀಸ್ ಕಸ್ಟಡಿಯಲ್ಲಿ ಇದ್ದ ಅವಧಿಯನ್ನು ಕೆಸಿಎಸ್ (ಸಿಸಿಎ) ನಿಯಮಾವಳಿಗಳ ನಿಯಮ 10(2)(ಎ)"Deemed suspension" ಎಂದು ಭಾವಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1260 ಶಿಕ್ಷಣ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

## ಅಧಿಕೃತ ಜ್ಞಾಪನ

**ಸಂಖ್ಯೆ: ವಾಕೈ 102 ಕೈಸೇವಿ 2003, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಸರ್ಕಾರವು ಅಧಿಕೃತ ಜ್ಞಾಪನ ಸಂಖ್ಯೆ: ವಾಕೈ 82 ಕೈಸೇವಿ 96, ದಿನಾಂಕ:15.05.1997ರಂದು, ದಿನಾಂಕ: 01.01.1996ರಲ್ಲಿದ್ದಂತೆ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಸಹಾಯಕ ನಿರ್ದೇಶಕರ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿತ್ತು. ಈ ಜೇಷ್ಠತಾ ಪಟ್ಟಿಯ ವಿರುದ್ಧ ಶ್ರೀ ಎಸ್.ಹೆಚ್. ವೀರಣ್ಣ ಮತ್ತಿತರರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 2444-2447/98ನ್ನು ಸಲ್ಲಿಸಿರುತ್ತಾರೆ. ಜಂಟಿ ನಿರ್ದೇಶಕರ ಹುದ್ದೆಗೆ ನೇರ ನೇಮಕಾತಿ ಇರುವುದಿಲ್ಲ. ಈ ಹುದ್ದೆಗೆ ಉಪ ನಿರ್ದೇಶಕರ ವೃಂದದಿಂದ ಮುಂಬಡ್ತಿ ಮೇರೆಗೆ ತುಂಬಲಾಗುತ್ತಿದೆ. ಉಪ ನಿರ್ದೇಶಕರ ಹುದ್ದೆಗಳಿಗೂ ನೇರ ನೇಮಕಾತಿ ಇಲ್ಲವಾಗಿದ್ದು ಈ ಹುದ್ದೆಗಳನ್ನು ಸಹಾಯಕ ನಿರ್ದೇಶಕರ ವೃಂದದ ಅಧಿಕಾರಿಗಳ ಮುಂಬಡ್ತಿಯಿಂದ ತುಂಬಲಾಗುತ್ತಿದೆ. ಈ ರೀತಿ ಪೋಷಕ ವೃಂದದ ಜೇಷ್ಠತಾ ಪಟ್ಟಿಯನ್ನು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಿಸಿರುವ ಅರ್ಜಿಗಳ ಮೇಲೆ ನ್ಯಾಯ ಮಂಡಳಿಯು ನೀಡುವ ತೀರ್ಪನ್ನು ಆಧರಿಸಿ ಪುನರ್ ಪರಿಷ್ಕರಿಸಬಹುದಾದ ಷರತ್ತಿಗೆ ಒಳಪಡಿಸಿ, ದಿನಾಂಕ: 01.01.2003ರಲ್ಲಿರುವಂತೆ ಜಂಟಿ ನಿರ್ದೇಶಕರ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲು ಸರ್ಕಾರವು ತೀರ್ಮಾನಿಸಿದೆ. ಈ ರೀತಿ ಪುನರ್‌ಪರಿಷ್ಕರಿಸುವಾಗ ನ್ಯಾಯಾಲಯದ ಆದೇಶಗಳು, ಪೋಷಕ ವೃಂದಗಳ ಜೇಷ್ಠತಾ ಪಟ್ಟಿಗಳು, ಬಡ್ತಿಯ ದಿನಾಂಕಗಳು, ಸೇವಾ ಹಿರಿತನದ ಬಗ್ಗೆ ಸರ್ಕಾರವು ನಿರ್ದಿಷ್ಟಪಡಿಸಿರುವ ಮಾರ್ಗಸೂಚಿಗಳು ಮತ್ತು ಚಾಲ್ತಿಯಲ್ಲಿರುವ ನಿಯಮಗಳನ್ನು ಗಮನದಲ್ಲಿರಿಸಿಕೊಂಡು ದಿನಾಂಕ: 01.01.2003ರಲ್ಲಿರುವಂತೆ ತಯಾರಿಸಿರುವ ಜಂಟಿ ನಿರ್ದೇಶಕರ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಅನುಬಂಧದಲ್ಲಿ ಲಗತ್ತಿಸಲಾಗಿದ್ದು, ಕರ್ನಾಟಕ ಸರ್ಕಾರಿ ಸೇವಾ (ಜೇಷ್ಠತಾ) ನಿಯಮಾವಳಿ 1957ರ ನಿಯಮ 10ರ ಅನುಸಾರ ಸಂಬಂಧಿಸಿದ ಅಧಿಕಾರಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ.

ಅನುಬಂಧದಲ್ಲಿರುವ ಪರಿಷ್ಕೃತ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿರುವ ಸ್ಥಾನವನ್ನು ಒಪ್ಪಿಕೊಳ್ಳುವುದರಿಂದ ಬಾದಿತರಾದ ಅಥವಾ ಒಪ್ಪಿಕೊಳ್ಳದ ಅಧಿಕಾರಿಗಳು ಈ ಸ್ಥಾನದಿಂದ ಬಾಧಿತರಾಗಿರುವುದಕ್ಕೆ ಅಥವಾ ಒಪ್ಪಿಕೊಳ್ಳದಿರುವುದಕ್ಕೆ ನಿರ್ದಿಷ್ಟ ಕಾರಣಗಳು ಮತ್ತು ಆಧಾರಗಳನ್ನೊಳಗೊಂಡ ಆಕ್ಷೇಪಣೆಯನ್ನು:ಗಳನ್ನು ದ್ವಿಪ್ರತಿಗಳಲ್ಲಿ ಹಾಗೂ ಹೆಸರು, ದಿನಾಂಕಗಳು, ಸೇವಾ ವಿವರಗಳು ಮೊದಲಾದವುಗಳಲ್ಲಿ ನಿರ್ದಿಷ್ಟ ತಪ್ಪುಗಳು ಕಂಡುಬಂದಲ್ಲಿ, ಅವುಗಳ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಅಂತಹ ಮನವಿಯನ್ನು ನಿರ್ದಿಷ್ಟ ದಾಖಲೆಗಳೊಡನೆ ದ್ವಿಪ್ರತಿಗಳಲ್ಲಿ ದಿನಾಂಕ: 31.10.2003ರೊಳಗೆ ಸರ್ಕಾರದ ಕಾರ್ಯದರ್ಶಿಗಳು (ಗಣಿ, ಸಪ್ರಕೈ ಮತ್ತು ಜವಳಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಬಹುಮಹಡಿಗಳ ಕಟ್ಟಡ, ಮೂರನೇ ಮಹಡಿ, ಡಾ: ಅಂಬೇಡ್ಕರ್ ವೀದಿ, ಬೆಂಗಳೂರು-560 001, ಇವರಿಗೆ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರ ಮೂಲಕ ಸಲ್ಲಿಸಬಹುದು ಮತ್ತು ಅದರ ಒಂದು ಮುಂಗಡ ಪ್ರತಿಯನ್ನು ಕೆಳಗೆ ಸಹಿ ಮಾಡಿರುವವರಿಗೆ ಕಳುಹಿಸಿಕೊಡತಕ್ಕದ್ದು. ನಿರ್ದಿಷ್ಟ ಕಾರಣಗಳು, ಆಧಾರಗಳು ಮತ್ತು ದಾಖಲೆಗಳನ್ನು ಹೊಂದದಿರುವ ಆಕ್ಷೇಪಣೆಗಳನ್ನು: ಮನವಿಗಳನ್ನು ಮತ್ತು ನಿಗದಿತ ಅವಧಿಯನ್ನು ಮೀರಿ ತಲುಪಿದ:ತಲುಪುವ ಆಕ್ಷೇಪಣೆಗಳನ್ನು: ಮನವಿಗಳನ್ನು ಸರ್ಕಾರವು ಪರಿಗಣಿಸುವುದಿಲ್ಲವೆಂದು ತಿಳಿಯತಕ್ಕದ್ದು.

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕೈಗಾರಿಕೆ ಸೇವೆಗಳು).

ದಿನಾಂಕ: 01.01.2003ಕ್ಕೆ ಅನ್ವಯಿಸುವಂತೆ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ವೇತನ ಶ್ರೇಣಿ ರೂ. 10620-260-1880-320-13440-380-14960ರಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಜಂಟಿ ನಿರ್ದೇಶಕರುಗಳ ತಾತ್ಕಾಲಿಕ:ಜೇಷ್ಠತಾ ಪಟ್ಟಿ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ನೇರ ನೇಮಕಾತಿ/ ಮುಂಬಡ್ತಿ/ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| 1 | 2 | 3 | 4 | 5 | 6 | 7 |
| | **ಶ್ರೀಯುತರು:** | | | | | |
| 1. | ಸಿ.ಎಸ್. ನಾಗವೇಂದ್ರ ಸ್ವಾಮಿ | ಮುಂಬಡ್ತಿ | 02.08.1945 | 10.04.1974 | 10.06.1982 | 10.06.1982 |
| 2. | ಕೆ. ತಿಮ್ಮರಾಯಪ್ಪ | ಮುಂಬಡ್ತಿ | 30.06.1945 | 11.03.1974 | 10.06.1982 | 10.06.1982 |
| 3. | ಎಸ್.ಬಿ. ಭೋಜೇಂದ್ರ | ಮುಂಬಡ್ತಿ | 23.04.1945 | 13.03.1974 | 10.06.1982 | 10.06.1982 |
| 4. | ಕೆ. ರಾಮಣ್ಣ ನಾಯಕ್ | ಮುಂಬಡ್ತಿ | 10.02.1951 | 25.03.1974 | 03.11.1982 | 03.11.1982 |
| 5. | ಆರ್. ಬಸವರಾಜು | ಮುಂಬಡ್ತಿ | 10.06.1949 | 22.05.1981 | 21.01.1986 | 21.01.1986 |
| 6. | ಕೆ.ಎಸ್. ಕಪ್ಪಾಲಿ | ಮುಂಬಡ್ತಿ | 01.05.1950 | 12.05.1977 | 11.11.1988 | 11.11.1988 |
| 7. | ಎ. ರಾಮಕೃಷ್ಣ | ಮುಂಬಡ್ತಿ | 04.06.1950 | 12.10.1978 | 11.11.1988 | 11.11.1988 |
| 8. | ಕೆ.ಎಲ್. ಲೋಕನಾಥ್ | ಮುಂಬಡ್ತಿ | 20.06.1952 | 25.01.1978 | 11.11.1988 | 11.11.1988 |
| 9. | ಎನ್. ಶ್ರೀರಾಮನ್ | ಮುಂಬಡ್ತಿ | 12.10.1952 | 14.10.1978 | 11.11.1988 | 11.11.1988 |
| 10. | ಎಸ್.ಬಿ. ಕೊಲ್ಹಾರ್ | ಮುಂಬಡ್ತಿ | 10.06.1950 | 12.10.1978 | 11.11.1988 | 11.11.1988 |
| 11. | ಜಿ.ಸಿ. ಇಂದ್ರರಾಜ ಅರಸ್ | ಮುಂಬಡ್ತಿ | 04.11.1951 | 29.09.1978 | 19.11.1988 | 19.11.1988 |
| 12. | ವಿ. ನಾಗೇಂದ್ರ | ಮುಂಬಡ್ತಿ | 01.07.1946 | 17.10.1978 | 23.02.1989 | 23.02.1989 |
| 13. | ವಿ. ರಾಮನಾಥ್ | ಮುಂಬಡ್ತಿ | 31.08.1952 | 25.09.1978 | 23.02.1989 | 23.02.1989 |
| 14. | ಹೆಚ್.ವಿ. ರಘುರಾಂ | ಮುಂಬಡ್ತಿ | 16.05.1957 | 18.06.1982 | 30.05.1992 | 30.05.1992 |
| 15. | ಸಿ. ವೀರಭದ್ರಯ್ಯ | ಮುಂಬಡ್ತಿ | 01.06.1956 | 18.06.1982 | 30.05.1992 | 30.05.1992 |
| 16. | ಟಿ.ಎಸ್. ಸುಧಾಕರ್ | ಮುಂಬಡ್ತಿ | 15.06.1945 | 19.06.1982 | 30.05.1992 | 30.05.1992 |
| 17. | ಡಿ.ಕೆ. ಬೋರ್ಕರ್ | ಮುಂಬಡ್ತಿ | 04.08.1948 | 19.06.1982 | 10.03.1993 | 10.03.1993 |
| 18. | ಟಿ.ಕೆ. ರಾಣೋಜಿರಾವ್ | ಮುಂಬಡ್ತಿ | 30.06.1956 | 10.07.1982 | 10.06.1993 | 10.06.1993 |
| 19. | ಅಬ್ದುಲ್ ಅಜೀಜ್ | ಮುಂಬಡ್ತಿ | 06.08.1955 | 18.06.1982 | 11.11.1993 | 11.11.1993 |
| 20. | ಎಸ್.ಟಿ. ಪರಮೇಶ್ವರಪ್ಪ | ಮುಂಬಡ್ತಿ | 14.06.1953 | 18.06.1982 | 09.08.1995 | 11.11.1995 |
| 21. | ಎ.ಎ. ಉಪ್ಪಿನ್ | ಮುಂಬಡ್ತಿ | 02.11.1958 | 18.06.1982 | 11.11.1993 | 11.11.1993 |
| 22. | ಡಿ.ಎಸ್. ವಿಶ್ವನಾಥ್ | ಮುಂಬಡ್ತಿ | 15.04.1956 | 22.06.1982 | 11.11.1993 | 11.11.1993 |
| 23. | ಹೆಚ್.ಎಸ್. ಪ್ರಕಾಶ್ | ಮುಂಬಡ್ತಿ | 25.04.1958 | 18.06.1982 | 11.11.1993 | 11.11.1993 |
| 24. | ಕೆ.ಎಸ್. ಶಿವಸ್ವಾಮಿ | ಮುಂಬಡ್ತಿ | 10.07.1956 | 16.08.1982 | 09.08.1995 | 09.08.1995 |
| 25. | ಟಿ. ಹಾಲಸ್ವಾಮಿ | ಮುಂಬಡ್ತಿ | 22.07.1957 | 16.08.1982 | 09.08.1995 | 09.08.1995 |
| 26. | ಜಿ. ನಾರಾಯಣರಾಜು | ಮುಂಬಡ್ತಿ | 29.06.1957 | 16.08.1982 | 09.08.1995 | 09.08.1995 |
| 27. | ಎಂ.ಎ. ಹುಸೇನ್ | ಮುಂಬಡ್ತಿ | 30.05.1957 | 16.08.1982 | 13.02.1996 | 13.02.1996 |
| 28. | ಜೆ. ರಂಗರಾಮು | ಮುಂಬಡ್ತಿ | 15.01.1958 | 02.09.1982 | 20.08.1996 | 20.08.1996 |
| 29. | ಎಂ.ಎನ್. ಕರೂರ್ | ಮುಂಬಡ್ತಿ | 06.05.1959 | 16.08.1982 | 20.08.1996 | 20.08.1996 |
| 30. | ಎಮ್. ಪ್ರಭು | ಮುಂಬಡ್ತಿ | 02.05.1958 | 16.08.1982 | 20.08.1996 | 20.08.1996 |
| 31. | ಅಬ್ದುಲ್ ಮುಜೀಬ್ | ಮುಂಬಡ್ತಿ | 06.08.1948 | 07.11.1982 | 15.07.1998 | 15.07.1998 |
| 32. | ಎನ್. ಚಂದ್ರಶೇಖರ್ | ಮುಂಬಡ್ತಿ | 03.02.1958 | 16.08.1982 | 15.07.1998 | 15.07.1998 |
| 33. | ಬಿ.ಪಿ. ಶ್ರೀನಿವಾಸ್ | ಮುಂಬಡ್ತಿ | 08.06.1957 | 16.08.1982 | 15.07.1998 | 15.07.1998 |
| 34. | ಜಿ.ಎಸ್. ಕುಲಕರ್ಣಿ | ಮುಂಬಡ್ತಿ | 30.08.1958 | 31.08.1982 | 15.07.1998 | 15.07.1998 |
| 35. | ಹೆಚ್.ಆರ್. ಜಯದೇವಪ್ಪ | ಮುಂಬಡ್ತಿ | 31.08.1958 | 16.08.1982 | 15.07.1998 | 15.07.1998 |
| 36. | ಸೈಯದ್ ಇಸ್ಹಾಕ್ ಅಹಮದ್ | ಮುಂಬಡ್ತಿ | 24.07.1958 | 16.08.1982 | 07.07.2000 | 18.07.2002 |
| 37. | ಹೆಚ್. ಪ್ರಕಾಶ್ | ಮುಂಬಡ್ತಿ | 25.04.1958 | 16.08.1982 | 07.07.2000 | 18.07.2002 |
| 38. | ಕೆ.ಜೆ. ಸುರೇಶ್ | ಮುಂಬಡ್ತಿ | 23.04.1956 | 16.08.1982 | 07.07.2000 | 18.07.2002 |

| 1 | 2 | 3 | 4 | 5 | 6 | 7 |
|---|---|---|---|---|---|---|
| 39. | ಬಿ.ಎಸ್. ಸಿರ್ಸಿಕರ್ | ಮುಂಬಡ್ತಿ | 28.10.1958 | 16.08.1982 | 07.07.2000 | 18.07.2002 |
| 40. | ಎಂ. ಸುಜ್ಞಾನಮೂರ್ತಿ | ಮುಂಬಡ್ತಿ | 12.05.1956 | 20.08.1982 | 07.07.2000 | 18.07.2002 |
| 41. | ಕೆ.ಎ. ಜಯಾನಂದ್ | ಮುಂಬಡ್ತಿ | 01.06.1955 | 16.08.1982 | 07.07.2000 | 18.07.2002 |
| 42. | ಪಿ. ಪ್ರಭುದೇವ್ | ಮುಂಬಡ್ತಿ | 27.05.1957 | 16.08.1982 | 07.07.2000 | 18.07.2002 |
| 43. | ಜಿ.ಎಸ್. ಬಾಬುಸಿದ್ದಕುಮಾರ್ | ಮುಂಬಡ್ತಿ | 16.03.1955 | 16.08.1982 | 07.07.2000 | 18.07.2002 |
| 44. | ಎಂ.ಪಿ. ಹೇಮಂತ್ ಕುಮಾರ್ | ಮುಂಬಡ್ತಿ | 16.10.1956 | 16.08.1982 | 04.05.2002 | 18.07.2002 |
| 45. | ಹೆಚ್. ಮುಕುಂದ ಕೃಷ್ಣೇಗೌಡ | ಮುಂಬಡ್ತಿ | 02.08.1954 | 16.08.1982 | 07.07.2000 | 18.07.2002 |
| 46. | ಹೆಚ್. ರಾಮಕೃಷ್ಣಗೌಡ | ಮುಂಬಡ್ತಿ | 25.05.1958 | 16.08.1982 | 07.07.2000 | 18.07.2002 |
| 47. | ಎ. ಆನಂದ್ | ಮುಂಬಡ್ತಿ | 17.09.1954 | 06.09.1982 | 07.07.2000 | 18.07.2002 |
| 48. | ಶ್ರೀಮತಿ ಕೋಮಲ | ಮುಂಬಡ್ತಿ | 18.11.1958 | 16.08.1982 | 07.07.2000 | 18.07.2002 |
| 49. | ಎಂ.ಜೆ. ಜೀವಣ್ಣವರ | ಮುಂಬಡ್ತಿ | 07.11.1958 | 16.08.1982 | 07.07.2000 | 09.09.2002 |

**ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 1261 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕೈಗಾರಿಕೆ ಸೇವೆಗಳು).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಕೆ.ವಿ. ವೆಂಕಟೇಶುಡು, ಹಿಂದಿನ ತಹಶೀಲ್ದಾರ್, ನಾಗಮಂಗಲ ತಾಲ್ಲೂಕು ಹಾಲಿ ನಿವೃತ್ತರು ಹಾಗೂ ಶ್ರೀ ವಿ. ಕೆಂಪಯ್ಯ, ಹಿಂದಿನ ರಾಜಸ್ವ ನಿರೀಕ್ಷಕ ತಾಲ್ಲೂಕು ಕಛೇರಿ ನಾಗಮಂಗಲ, ಹಾಲಿ ನಿವೃತ್ತರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 36 ಎಡಿಇ 2003, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಶ್ರೀ ಕೆ.ವಿ. ವೆಂಕಟೇಶುಡು, ನಿವೃತ್ತ ತಹಶೀಲ್ದಾರ್ ಹಾಗೂ ಶ್ರೀ ವಿ. ಕೆಂಪಯ್ಯ, ಹಿಂದಿನ ರಾಜಸ್ವ ನಿರೀಕ್ಷಕ, ತಾಲ್ಲೂಕು ಕಛೇರಿ ನಾಗಮಂಗಲ, ಹಾಲಿ ನಿವೃತ್ತರು ಇವರುಗಳು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಸದರಿ ತಾಲ್ಲೂಕಿನ ಗದ್ದೇಭೂವನಹಳ್ಳಿ ಗ್ರಾಮದ ಸ.ನಂ. 109ರಲ್ಲಿ ಮೂಲ ದಾಖಲಾತಿಗಳ ಪ್ರಕಾರ ಸರ್ಕಾರಿ ಬೀಳು ಆಗಿದ್ದು, ಸದರಿ ನಿವೃತ್ತ ಅಧಿಕಾರಿಯು ಶ್ರೀಮತಿ ಪುಟ್ಟಬಸಮ್ಮ ಕೋಂ ಹುಚ್ಚಯ್ಯ ಎಂಬುವವರಿಗೆ ಆದೇಶ ಸಂಖ್ಯೆ: ಆರ್.ಕೆ. ಬೀಳು:ಸಿಆರ್:13:98-99, ದಿನಾಂಕ: 24.07.2000ರಲ್ಲಿ ಈ ಜಮೀನನ್ನು ಬೀಳು ರೆಸ್ಟೋರ್ ಮಾಡಿ ಅಕ್ರಮವಾಗಿ ಹಕ್ಕುಪತ್ರವನ್ನು ನೀಡಿ ಕರ್ತವ್ಯಲೋಪ ಎಸಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದ ಮೇಲ್ಕಂಡ ದುರ್ನಡತೆಗೆ ಶ್ರೀ ಕೆ.ವಿ. ವೆಂಕಟೇಶುಡು, ನಿವೃತ್ತ ತಹಶೀಲ್ದಾರ್ ಹಾಗೂ ಶ್ರೀ ವಿ. ಕೆಂಪಯ್ಯ, ಹಿಂದಿನ ರಾಜಸ್ವ ನಿರೀಕ್ಷಕ, ತಾಲ್ಲೂಕು ಕಛೇರಿ, ನಾಗಮಂಗಲ ಹಾಲಿ ನಿವೃತ್ತರು ಇವರುಗಳ ವಿರುದ್ಧ ಶಿಸ್ತುಕ್ರಮ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸುತ್ತದೆ.

ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ವಿ. ವೆಂಕಟೇಶುಡು, ನಿವೃತ್ತ ತಹಶೀಲ್ದಾರ್, ಹಾಗೂ ಶ್ರೀ ವಿ. ಕೆಂಪಯ್ಯ, ಹಿಂದಿನ ರಾಜಸ್ವ ನಿರೀಕ್ಷಕ, ತಾಲ್ಲೂಕು ಕಛೇರಿ, ನಾಗಮಂಗಲ, ಹಾಲಿ ನಿವೃತ್ತರು ಇವರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ಮತ್ತು 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಮಹಂತೇಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 1262 ಕಂದಾಯ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಬದರಿನಾಥ, ಹಿಂದಿನ ತಹಶೀಲ್ದಾರ್, ಮಳವಳ್ಳಿ ತಾಲ್ಲೂಕು ಹಾಲಿ ನೇಮಕಾತಿ ನಿರೀಕ್ಷಣೆಯಲ್ಲಿರುವವರು-ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1) ಹಿಂದಿನ ವಿಭಾಗಾಧಿಕಾರಿ, ಮೈಸೂರು ವಿಭಾಗ, ಮೈಸೂರು ಇವರ ದಿನಾಂಕ: 9.11.2001ರ ಪತ್ರ ಸಂಖ್ಯೆ:ಸಿಬ್ಬಂದಿ(6) ಸಿಆರ್:251:2000-01.
2) ದಿನಾಂಕ: 04.10.2002ರ ತಿಳುವಳಿಕೆ ಪತ್ರ ಸಂಖ್ಯೆ: ಆರ್‌ಡಿ 46 ಎಡಿಇ 2001.
3) ಶ್ರೀ ಬದರಿನಾಥ್ ರವರ ದಿನಾಂಕ: 11.10.2002ರ ಲಿಖಿತ ಸಮಜಾಯಿಷಿ.

**ಪ್ರಸ್ತಾವನೆ:**

ಶ್ರೀ ಬದರಿನಾಥ್, ಹಿಂದಿನ ತಹಶೀಲ್ದಾರ್, ಮಳವಳ್ಳಿ ತಾಲ್ಲೂಕು ಇವರು ಸದರಿ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಆ ತಾಲ್ಲೂಕಿನ ಹಲಗೂರು ಗ್ರಾಮದ ಸ.ನಂ.2ರಲ್ಲಿನ ಜಮೀನು ಸರ್ಕಾರಿ ಜಮೀನಾಗಿದ್ದು, ಅದನ್ನು ಅತಿಕ್ರಮಣ ಮಾಡಿ ಕಟ್ಟಡ ಕಟ್ಟಿರುವವರ ಬಗ್ಗೆ ಕ್ರಮ ಜರುಗಿಸಲು ಅವರ ಹಿಂದಿನ ತಹಶೀಲ್ದಾರರು ಹೊರಡಿಸಿದ್ದ ನೋಟೀಸ್‌ಗಳನ್ನು ಸಕಾರಣವಿಲ್ಲದೆ ಹಿಂದಕ್ಕೆ ಪಡೆದಿರುತ್ತಾರೆಂದು, ಕರ್ನಾಟಕ ಉಚ್ಚನ್ಯಾಯಾಲಯದ ಮುಂದೆ ಪ್ರಕರಣ ಬಂದಿದ್ದಾಗ ತಹಶೀಲ್ದಾರ್ ಮಟ್ಟದಲ್ಲಿಯೇ ಈ ಬಗ್ಗೆ ಕ್ರಮ ಜರುಗಿಸುವಂತೆ ನ್ಯಾಯಾಲಯವು ತಿಳಿಸಿದ್ದರೂ ಸಹ ಅತಿಕ್ರಮಣ ಪ್ರದೇಶವನ್ನು ಖುಲ್ಲಾಪಡಿಸಿ ಕ್ರಮ ವಹಿಸುವ ಬದಲು ಅತಿಕ್ರಮಣದಾರರಿಗೆ ಸಹಾಯ ಮಾಡಿರುತ್ತಾರೆಂದು ಹಾಗೂ ಸದರಿ ತಾಲ್ಲೂಕಿನ ಬಿ.ಜಿ. ಪುರ ಹೋಬಳಿ, ಹೊಸಹಳ್ಳಿ ಗ್ರಾಮದ ಮಠಕ್ಕೆ ಸೇರಿದ ಜಮೀನನ್ನು ಯಾವ ಆದೇಶವು ಇಲ್ಲದೆ ಬೇರೆಯವರ ಹೆಸರಿಗೆ ಆರ್.ಟಿ.ಸಿ. ಬರೆದು ನಕಲು ನೀಡಿ ದುರ್ನಡತೆ ಎಸಗಿರುವ ಸದರಿ ವೃತ್ತದ ಗ್ರಾಮ ಲೆಕ್ಕಿಗರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮೇಲಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸದೆ ಕರ್ತವ್ಯಲೋಪ ಎಸಗಿರುತ್ತಾರೆಂದು, ಅದರಿಂದಾಗಿ ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪತ್ರದಲ್ಲಿ ಹಿಂದಿನ ಮೈಸೂರು ವಿಭಾಗಾಧಿಕಾರಿಯವರು ಕೋರಿರುತ್ತಾರೆ.

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರ ಮೇರೆಗೆ ಮೇಲ್ಕಂಡ ಆರೋಪಗಳ ಬಗ್ಗೆ ಆರೋಪಿತರ ವಿರುದ್ಧ ಆರೋಪ ಪಟ್ಟಿಗಳನ್ನು (ಅನುಬಂಧ 1 ರಿಂದ 4ರವರೆಗೆ) ಜಾರಿ ಮಾಡಿ ಸದರಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು. ಸದರಿ ತಿಳುವಳಿಕೆ ಪತ್ರಕ್ಕೆ ಅನುಗುಣವಾಗಿ ಶ್ರೀ ಬದರಿನಾಥ್‌ರವರು ಮೇಲೆ ಕ್ರಮ ಸಂಖ್ಯೆ:(3)ರಲ್ಲಿ ಓದಲಾದ ಲಿಖಿತ ಹೇಳಿಕೆಯನ್ನು ಸಲ್ಲಿಸಿ ಅವರ ವಿರುದ್ಧದ ಎರಡು ಆರೋಪಗಳು ಸಹ ಸತ್ಯಕ್ಕೆ ದೂರವಾಗಿರುತ್ತದೆಯೆಂದು ತಿಳಿಸಿ ಆ ಆರೋಪಗಳನ್ನು ಅಲ್ಲಗಳೆದಿರುತ್ತಾರೆ ಹಾಗೂ ಸದರಿ ಆರೋಪಗಳಿಂದ ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 11 ಎಡಿಇ 2001, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬದರಿನಾಥ್, ಹಿಂದಿನ ತಹಶೀಲ್ದಾರ್, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ ಹಾಲಿ ನೇಮಕಾತಿ ನಿರೀಕ್ಷಣೆಯಲ್ಲಿರುವವರು, ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.643, 10ನೇ ಮುಖ್ಯ ರಸ್ತೆ, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಂಡ್ಯ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ: ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ. 5.000 (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ: 04.03.02ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001ರನ್ವಯ 1000 (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಮಂಡ್ಯ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು 2 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1263 ಕಂದಾಯ ಇಲಾಖೆ (ಸೇವೆಗಳು-3).

**ಇಂಧನ ಸಚಿವಾಲಯ**

**ವಿಷಯ:** ಮೆಸರ್ಸ್ ಭರೂಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪೆನಿಗೆ 1 ಮೆಗಾವ್ಯಾಟ್ ಸಾಮರ್ಥ್ಯದ ಶಹಪುರ ಡಿಸ್ಟ್ರಿಬ್ಯೂಟರಿ-9 ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 54 ಎನ್‌ಸಿಇ 1999 (ಇ), ದಿನಾಂಕ:26.08.1999.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 127 ಎನ್‌ಸಿಇ 2003, ದಿನಾಂಕ: 12.06.2003.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶಹಪುರ/2003/1287, ದಿನಾಂಕ: 18.08.2003.

**ಪ್ರಸ್ತಾವನೆ:**

ಮೆಸರ್ಸ್ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪೆನಿಗೆ ಗುಲ್ಬರ್ಗಾ ಜಿಲ್ಲೆಯ ಶಹಾಪುರ ತಾಲ್ಲೂಕಿನ ಬನತಾಲ್ ಎಂಬಲ್ಲಿ ಶಹಪುರ ಬ್ರಾಂಚ್ ಕಾಲುವೆಯ ಡಿಸ್ಟ್ರಿಬ್ಯೂಟರಿ 9ರಲ್ಲಿ 1 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿತ್ತು. ಸದರಿ ಯೋಜನೆಗೆ ದಿನಾಂಕ: 31.08.2003ರವರೆಗೆ ಕಾಲಾವಕಾಶವನ್ನು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ನೀಡಲಾಗಿತ್ತು. ಅಭಿವೃದ್ಧಿದಾರರು ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಗಣನೀಯ ಪ್ರಗತಿ ಸಾಧಿಸಿರುವುದನ್ನು ಮನಗಂಡು ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಮುಂದಿನ ಒಂದು ವರ್ಷದ ಅವಧಿಗೆ ವಿಸ್ತರಿಸುವಂತೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೇಲೆ (3)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 127 ಎನ್‌ಸಿಇ 2003, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್, 2003**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಮೆಸರ್ಸ್ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪೆನಿಗೆ ಗುಲ್ಬರ್ಗಾ ಜಿಲ್ಲೆಯ ಶಹಾಪುರ ತಾಲ್ಲೂಕಿನ ಬನತಾಲ್ ಎಂಬಲ್ಲಿ ಶಹಪುರ ಬ್ರಾಂಚ್ ಕಾಲುವೆಯ ಡಿಸ್ಟ್ರಿಬ್ಯೂಟರಿ 9ರಲ್ಲಿ 1 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದ ನಿಬಂಧನೆಗೊಳಪಟ್ಟು ಕಾಲಾವಕಾಶವನ್ನು ದಿನಾಂಕ: 01.09.2003 ರಿಂದ ಅಂದರೆ ದಿನಾಂಕ: 28.02.2004 (6 ತಿಂಗಳ ಅವಧಿಗೆ) ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 1264

**ವಿಷಯ:** ಮೆಸರ್ಸ್ ಪುಸಾಲ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ ಕೆಂಚಮ್ಮನಗುಡ್ಡದಲ್ಲಿರುವ ವಿಜಯನಗರ ಅಣೆಕಟ್ಟೆಗೆ ಹೊಂದಿ ಹಂಚಿಕೆಯಾಗಿರುವ 4.5 ಮೆಗಾವಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 6 ಮೆಗಾವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 174 ಎನ್‌ಸಿಇ 2001, ದಿನಾಂಕ:28.01.2002.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 36 ಎನ್‌ಸಿಇ 2002, ದಿನಾಂಕ: 13.06.2002.
3) ಸರ್ಕಾರಿ ಆದೇಶ ಸಂಖ್ಯೆ: ಡಿಇ 36 ಎನ್‌ಸಿಇ 2002, ದಿನಾಂಕ: 15.02.2003.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕೆಂಚಮ್ಮನಗುಡ್ಡ /2003/1508, ದಿನಾಂಕ: 26/27.09.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆಸರ್ಸ್ ಜ್ಯೋತಿ ಜಲಶಕ್ತಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ ಕೆಂಚಮ್ಮನಗುಡ್ಡಮ್ ಗ್ರಾಮದಲ್ಲಿ 0.3 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆಸರ್ಸ್ ಪುಸಾಲ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ ಕೆಂಚಮ್ಮನಗುಡ್ಡದ ವಿಜಯನಗರ ಅಣೆಕಟ್ಟೆಗೆ ಹೊಂದಿ 1.5 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಮಾಡಲಾಗಿದೆ.

3. ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆಸರ್ಸ್ ಪುಸಾಲ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್‌ನಿಂದ 4.5 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಅನುಮತಿ ನೀಡಲಾಗಿದೆ.

4. ಪ್ರಸ್ತುತ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು, ಮೇಲೆ (4)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಮೆಸರ್ಸ್ ಜ್ಯೋತಿ ಜಲಶಕ್ತಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಹಂಚಿಕೆ ಮಾಡಲಾದ 0.3 ಮೆಗಾವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಮೆಸರ್ಸ್ ಪುಸಾಲ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸಿ ಒಟ್ಟು ಸಾಮರ್ಥ್ಯವನ್ನು 6 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

5. ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 251 ಎನ್‌ಸಿಇ 2003, ಬೆಂಗಳೂರು, ದಿನಾಂಕ: 30ನೇ ಸೆಪ್ಟೆಂಬರ್, 2003**

6. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಪುಸಾಲ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ ಕೆಂಚಮ್ಮನಗುಡ್ಡದ ವಿಜಯನಗರದ ಅಣೆಕಟ್ಟೆಗೆ ಹೊಂದಿ ಮೇಲೆ (3)ರಲ್ಲಿ ಅನುಮತಿಸಲಾದ 4.5 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಒಟ್ಟು 6 ಮೆಗಾವ್ಯಾಟ್‌ಗೆ (ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಮೆಸರ್ಸ್ ಜ್ಯೋತಿ ಜಲಶಕ್ತಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಹಂಚಿಕೆ ಆದ 0.3 ಮೆಗಾವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಮೆಸರ್ಸ್ ಪುಸಾಲ ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ವರ್ಗಾಯಿಸಿ) ಹೆಚ್ಚಿಸಲು ಮೇಲೆ (2)ರಲ್ಲಿ ಓದಲಾದ ಹಂಚಿಕೆ ಆದೇಶದ ನಿಬಂಧನೆಗಳೊಂದಿಗೆ ಈ ಕೆಳಗಿನ ಹೆಚ್ಚಿನ ಷರತ್ತುಗಳೊಂದಿಗೆ ಅನುಮತಿ ನೀಡಲಾಗಿದೆ. (by utilizing the total surplus water over weirs (seven) of Vijayanagar anicut on Thungabhadra river near Kenchammanagudam village Siraguppa Taluk, Bellary District).

ಅ. ಯೋಜನೆಯ ವರ್ಗಾವಣೆಗೆ ಸಂಬಂಧಿಸಿದ ವರ್ಗಾವಣೆ ಶುಲ್ಕವನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ತುಂಬತಕ್ಕದ್ದು.

ಆ. ಜಲಸಂಪನ್ಮೂಲ ಇಲಾಖೆಯಿಂದ ಈ ಯೋಜನೆಗೆ ಅನುಮತಿಯನ್ನು ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್. 1265

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎನ್.ಎಂ. ನೀಲಕಂಠ, ಹಿಂದಿನ ತಹಶೀಲ್ದಾರ್, ಹಿರಿಯೂರು ತಾಲ್ಲೂಕು ಹಾಲಿ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಮತ್ತು ಶ್ರೀ ಎಂ. ದಾಸಪ್ಪ, ಆಹಾರ ನಿರೀಕ್ಷಕ, ತಾಲ್ಲೂಕು ಕಛೇರಿ, ಹಿರಿಯೂರು ಇವರುಗಳ ವಿರುದ್ಧ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ: 23.08.95ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 50 ಎಡಿಇ 93.

2) ಗೌರವಾನ್ವಿತ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಛೇರಿ ಬೆಂಗಳೂರು ಇವರ ದಿನಾಂಕ: 07.01.03ರ ಪತ್ರ ಸಂಖ್ಯೆ: ಲೋಕ:ಎಆರ್‌ಇ-5: ಇಎನ್‌ಕ್ಯೂ-6:96.

**ಪ್ರಸ್ತಾವನೆ:**

ಶ್ರೀ ಎನ್.ಎಂ. ನೀಲಕಂಠ, ಹಿಂದಿನ ತಹಶೀಲ್ದಾರ್, ಹಿರಿಯೂರು ತಾಲ್ಲೂಕು ಹಾಲಿ ಕೆಎಎಸ್. (ಕಿರಿಯ ಶ್ರೇಣಿ) ಅಧಿಕಾರಿ ಮತ್ತು ಶ್ರೀ ಎಂ. ದಾಸಪ್ಪ, ಆಹಾರ ನಿರೀಕ್ಷಕ, ತಾಲ್ಲೂಕು ಕಛೇರಿ, ಹಿರಿಯೂರು ಇವರು ತಮ್ಮ ಅಧಿಕಾರ ಸ್ಥಾನ ಕೃಪೆತೋರಿಸಲು ದೂರುದಾರರಾದ ಶ್ರೀ ಎಂ.ಎಲ್. ಲಿಂಗಾಚಾರ್ ಇವರಿಗೆ ಸೀಮೆಎಣ್ಣೆ ಮಾರಾಟ ಮಾಡಲು ಲೈಸೆನ್ಸ್ ನೀಡಲು ರೂ. 400.00ಗಳನ್ನು ಅಕ್ರಮ ಸಂಭಾವನೆ ಕೇಳಿ ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಸಿಕ್ಕಿಬಿದ್ದಿರುವುದಾಗಿ ಮತ್ತು ಈ ಬಗ್ಗೆ ಜರುಗಿದ ಪ್ರಾಥಮಿಕ ತನಿಖೆಯಿಂದ ಆಪಾದಿತರು ತಮ್ಮ ಅಧಿಕಾರ ಸ್ಥಾನ ಕೃಪೆ ತೋರಲು ಅಕ್ರಮ ಸಂಭಾವನೆಯನ್ನು ಕೇಳಿ ಪಡೆದುಕೊಂಡಿದ್ದಾರೆಂಬ ಆಪಾದನೆಯನ್ನು ಸಿದ್ಧಪಡಿಸಲು ಸಾಕಷ್ಟು ಸಾಕ್ಷ್ಯಾಧಾರಗಳಿರುವುದರಿಂದ ಆಪಾದಿತ ಅಧಿಕಾರಿ: ನೌಕರರ ದುರ್ನಡತೆಯ ಬಗ್ಗೆ ಇಲಾಖಾ ವಿಚಾರಣೆಗೆ ಆದೇಶಿಸಲು ಗೌ: ಕರ್ನಾಟಕ ಉಪಲೋಕಾಯುಕ್ತರು ಶಿಫಾರಸ್ಸು ಮಾಡಿದ್ದರ ಮೇರೆಗೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆಪಾದಿತರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಗೌ: ಕರ್ನಾಟಕ ಉಪಲೋಕಾಯುಕ್ತರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸಿ ತಮ್ಮ ವಿಚಾರಣಾ ವರದಿಯನ್ನು ಗೌ: ಕರ್ನಾಟಕ ಲೋಕಾಯುಕ್ತರಿಗೆ ಸಲ್ಲಿಸಿರುವ ಮೇರೆಗೆ ಅದನ್ನು ಪರಿಶೀಲಿಸಿರುವ ಗೌ: ಲೋಕಾಯುಕ್ತರು ಈ ಪ್ರಕರಣದಲ್ಲಿ ಆರೋಪಿತರಿಬ್ಬರ ವಿರುದ್ಧದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಯವರು ಅಭಿಪ್ರಾಯಪಟ್ಟಿರುವುದರಿಂದ ಅದನ್ನು ಸರ್ಕಾರವು ಪರಿಗಣಿಸಿದಲ್ಲಿ ಅದರಂತೆ ಆರೋಪಿತರಿಬ್ಬರನ್ನು ಅವರ ಆರೋಪಗಳಿಂದ ಮುಕ್ತಗೊಳಿಸುವ ಕ್ರಮ ಕೈಗೊಳ್ಳುವಂತೆ ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ಪತ್ರದಲ್ಲಿ ಅಪೇಕ್ಷಿಸಿರುತ್ತಾರೆ.

ಕರ್ನಾಟಕ ಲೋಕಾಯುಕ್ತ ಕಛೇರಿಯ ಅಪರ ನಿಬಂಧಕರು, ವಿಚಾರಣೆಗಳು-5 ಇವರ ವಿಚಾರಣಾ ವರದಿಯನ್ನು ಸಂಬಂಧಪಟ್ಟ ದಾಖಲೆಗಳೊಡನೆ ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಎನ್.ಎಂ. ನೀಲಕಂಠ, ಹಿಂದಿನ ತಹಶೀಲ್ದಾರ್, ಹಿರಿಯೂರು ತಾಲ್ಲೂಕು ಹಾಲಿ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಮತ್ತು ಶ್ರೀ ಎಂ. ದಾಸಪ್ಪ, ಆಹಾರ ನಿರೀಕ್ಷಕ, ತಾಲ್ಲೂಕು ಕಛೇರಿ, ಹಿರಿಯೂರು ಇವರ ವಿರುದ್ಧದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಇವರಿಬ್ಬರನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 50 ಎಡಿಇ 93, ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಎನ್.ಎಂ. ನೀಲಕಂಠ, ಹಿಂದಿನ ತಹಶೀಲ್ದಾರ್, ಹಿರಿಯೂರು ತಾಲ್ಲೂಕು ಹಾಲಿ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಮತ್ತು ಶ್ರೀ ಎಂ. ದಾಸಪ್ಪ, ಆಹಾರ ನಿರೀಕ್ಷಕ,

ತಾಲ್ಲೂಕು ಕಛೇರಿ ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇವರುಗಳ ವಿರುದ್ಧ ದಿನಾಂಕ: 23.08.95ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 50 ಎಡಿಇ 93ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿದೆ.

ಈ ಪ್ರಕರಣದ ಮಟ್ಟಿಗೆ ಮಾತ್ರ ಸಂಬಂಧಿಸಿದಂತೆ ಈ ಮೇಲೆ ತಿಳಿಸಿರುವ ಶ್ರೀ ಎನ್.ಎಂ. ನೀಲಕಂಠ ಹಾಗೂ ಶ್ರೀ ಎಂ. ದಾಸಪ್ಪ, ಇವರುಗಳ ವಿರುದ್ಧ ಈ ಇಲಾಖಾ ವಿಚಾರಣೆ ಜರುಗಿಸದಿದ್ದಲ್ಲಿ ಅವರುಗಳು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1266 ಕಂದಾಯ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಮೈಲಾರಪ್ಪ, ಹಿಂದಿನ ತಹಶೀಲ್ದಾರ್, ಮಧುಗಿರಿ ತಾಲ್ಲೂಕು ಹಾಲಿ ನಿವೃತ್ತರು ಇವರನ್ನು ಇವರ ವಿರುದ್ಧದ ಆರೋಪಗಳಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ: 03.06.02ರ ಸರ್ಕಾರಿ ಆದೇಶ ಸಂಖ್ಯೆ: ಕಂಇ 51 ಎಡಿಇ 2001.

2) ಶ್ರೀ ಸಿ.ಕೆ. ಬಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ಈ ಪ್ರಕರಣದಲ್ಲಿನ ವಿಚಾರಣಾಧಿಕಾರಿಗಳು ಇವರ ದಿನಾಂಕ: 27.12.02ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಮೈಲಾರಪ್ಪ, ಹಿಂದಿನ ತಹಶೀಲ್ದಾರ್, ಮಧುಗಿರಿ ತಾಲ್ಲೂಕು ಹಾಲಿ ನಿವೃತ್ತರು ಇವರು ಸದರಿ ತಾಲ್ಲೂಕಿನ ತಹಶೀಲ್ದಾರ್‌ರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಮಧುಗಿರಿ ತಾಲ್ಲೂಕಿನ ಲಿಂಗೇನಹಳ್ಳಿ ಗ್ರಾಮದ ಸರ್ವೆ ನಂ. 112:1ಬಿ ರಲ್ಲಿ 0-20 ಗುಂಟೆ ಜಮೀನಿನ ಖಾತೆ ಮತ್ತು ಪಹಣಿಯನ್ನು ಮಧುಗಿರಿ ಸಿವಿಲ್ ನ್ಯಾಯಾಲಯದಲ್ಲಿ ದಾವೆ ಸಂಖ್ಯೆ: 46:92ರಂತೆ ಪ್ರಕರಣವು ಇನ್ನೂ ವಿಚಾರಣಾ ಹಂತದಲ್ಲಿ ಬಾಕಿ ಇರುವಾಗಲೇ ಶ್ರೀ ಸಿದ್ಧಾರ್ಥ ವಿದ್ಯಾಸಂಸ್ಥೆ, ಮಧುಗಿರಿ ಇವರ ಹೆಸರಿಗೆ ಕಾನೂನು ಬಾಹಿರವಾಗಿ ಆರ್‌ಆರ್‌ಟಿ(ಡಿಸಿ):39:98-99 ದಿನಾಂಕ: 08.01.1999 ರಂತೆ ಖಾತೆ ಬದಲಾವಣೆಗೆ ಆದೇಶ ಮಾಡಿರುತ್ತಾರೆಂದು, ಈ ರೀತಿ ಆದೇಶ ಮಾಡುವಾಗ ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಕಲಂ 79(ಎ) ಮತ್ತು (ಬಿ) ಪ್ರಕಾರ ಖಾತೆದಾರರು ಆಕರ್ಷಕರಾಗುತ್ತಾರೆಯೇ ಅಥವಾ ಇಲ್ಲವೇ ಎಂಬ ಬಗ್ಗೆ ಪೂರ್ವ ಪರಿಶೀಲನೆ ಮಾಡದೇ ಕರ್ತವ್ಯಲೋಪ ಎಸಗಿರುವರೆಂಬ ಆಪಾದನೆಯ ಮೇಲೆ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಸಿ.ಕೆ. ಬಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆಯನ್ನು ಜರುಗಿಸಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ತಮ್ಮ ವಿಚಾರಣಾ ವರದಿಯಲ್ಲಿ ಶ್ರೀ ಮೈಲಾರಪ್ಪ, ಹಿಂದಿನ ತಹಶೀಲ್ದಾರ್, ಹಾಲಿ ನಿವೃತ್ತರು, ಇವರ ವಿರುದ್ಧ ಈ ಪ್ರಕರಣದಲ್ಲಿ ಅವರ ವಿರುದ್ಧ ಹೊರಿಸಲಾದ ಕರ್ತವ್ಯಲೋಪಗಳನ್ನೊಳಗೊಂಡ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಪರಿಶೀಲಿಸಿ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಶ್ರೀ ಮೈಲಾರಪ್ಪ, ಹಿಂದಿನ ತಹಶೀಲ್ದಾರ್, ಮಧುಗಿರಿ ತಾಲ್ಲೂಕು, ಹಾಲಿ ನಿವೃತ್ತರು ಇವರ ವಿರುದ್ಧದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಇವರನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 51 ಎಡಿಇ 2001, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಶ್ರೀ ಮೈಲಾರಪ್ಪ, ಹಿಂದಿನ ತಹಶೀಲ್ದಾರ್, ಮಧುಗಿರಿ ತಾಲ್ಲೂಕು, ಹಾಲಿ ನಿವೃತ್ತರು ಇವರನ್ನು ಇವರ ವಿರುದ್ಧ ದಿನಾಂಕ: 03.06.2002ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 51 ಎಡಿಇ 2001ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿದೆ.

ಈ ಪ್ರಕರಣದ ಮಟ್ಟಿಗೆ ಮಾತ್ರ ಸಂಬಂಧಿಸಿದಂತೆ ಶ್ರೀ ಮೈಲಾರಪ್ಪ, ಇವರ ವಿರುದ್ಧ ಈ ವಿಚಾರಣೆಯು ನಡೆಯದಿದ್ದಲ್ಲಿ ಅವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1267 ಕಂದಾಯ ಇಲಾಖೆ (ಸೇವೆಗಳು-3).

## ಸಹಕಾರ ಸಚಿವಾಲಯ

**ವಿಷಯ:** ರಾಜ್ಯದಲ್ಲಿನ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಅಧಿಸೂಚಿತ ಕೃಷಿ ಉತ್ಪನ್ನಗಳ ಖರೀದಿದಾರರಿಂದ ಪ್ರತಿಶತ 1.5 ರಷ್ಟು ಮಾರುಕಟ್ಟೆ ಶುಲ್ಕವನ್ನು ವಸೂಲಿ ಮಾಡುವ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಇವರ ಪತ್ರ ಸಂಖ್ಯೆ: ಕೃಮಾಇ/103/ನಿಯವಿ/2002, ದಿನಾಂಕ: 18/11/2002.

**ಪ್ರಸ್ತಾವನೆ:**

ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಅಧಿನಿಯಮ, 1966ರ, ಕಲಂ 65ರನ್ವಯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಅಧಿಸೂಚಿತ ಕೃಷಿ ಉತ್ಪನ್ನಗಳ ಖರೀದಿದಾರರಿಂದ ಮಾರುಕಟ್ಟೆ ಶುಲ್ಕವನ್ನು ವಸೂಲಿ ಮಾಡಲು ಅವಕಾಶವಿದೆ. ಪ್ರಾರಂಭದಲ್ಲಿ ಪ್ರತಿ ರೂ. 100-00 ಗಳಿಗೆ ರೂ. 0-30 ರಷ್ಟು ಮಾರುಕಟ್ಟೆ ಶುಲ್ಕವನ್ನು ವಿಧಿಸಲಾಗುತ್ತಿತ್ತು. ಅಧಿನಿಯಮ ಸಂಖ್ಯೆ: 20/1973ರನ್ವಯ ದಿನಾಂಕ: 23.10.1973 ರಿಂದ ಮಾರುಕಟ್ಟೆ ಶುಲ್ಕವನ್ನು ಶೇಕಡ 1ಕ್ಕೆ ಹೆಚ್ಚಿಸಿ ತಿದ್ದುಪಡಿ ಮಾಡಲಾಯಿತು. ಅದರಂತೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ತಮ್ಮ ಉಪನಿಯಮಗಳಿಗೆ ತಿದ್ದುಪಡಿ ಮಾಡಿ ಮಾರುಕಟ್ಟೆ ಶುಲ್ಕವನ್ನು ಗರಿಷ್ಠ ಶೇಕಡ 1ಕ್ಕೆ ಸೀಮಿತಗೊಳಿಸಿದವು. ತದನಂತರ, ದಿನಾಂಕ: 28/09/1978ರಿಂದ ಅನ್ವಯಿಸುವಂತೆ ಮಾರುಕಟ್ಟೆ ಶುಲ್ಕವನ್ನು ಶೇಕಡ 1 ರಿಂದ ಶೇಕಡ 2ಕ್ಕೆ ಹೆಚ್ಚಿಸಲಾಯಿತು. ಸದರಿ ಆದೇಶವನ್ನು ವ್ಯಾಪಾರಸ್ಥರು ಮಾನ್ಯ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು, ದಿನಾಂಕ:25.01.1982ರ ತೀರ್ಪಿನನುಸಾರ ಮಾರುಕಟ್ಟೆ ಶುಲ್ಕವನ್ನು ಶೇಕಡ 1 ರಿಂದ ಶೇಕಡ 2ಕ್ಕೆ ಹೆಚ್ಚಿಸಲಾದ ಆದೇಶವನ್ನು ಎತ್ತಿಹಿಡಿಯಲಾಯಿತು. ತದನಂತರ, ಸರ್ಕಾರದ ಸೂಚನೆಯ ಮೇರೆಗೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಮಾರುಕಟ್ಟೆ ಶುಲ್ಕವನ್ನು ಶೇಕಡ 1ಕ್ಕೆ ಸೀಮಿತಗೊಳಿಸಿದವು.

ಕೃಷಿಕರ ಹಿತದೃಷ್ಟಿಯಿಂದ ಮಾರುಕಟ್ಟೆಗಳಿಗೆ ಸಂಪರ್ಕ ಕಲ್ಪಿಸುವ ರಸ್ತೆಗಳ ನಿರ್ಮಾಣ ಮತ್ತು ಸುಧಾರಣೆಗಳಿಗಾಗಿ ಸಂಪನ್ಮೂಲಗಳನ್ನು ಕ್ರೋಢೀಕರಣಗೊಳಿಸುವುದು ಅವಶ್ಯಕವಾಗಿರುವ ಕಾರಣ ಮಾರುಕಟ್ಟೆ ಶುಲ್ಕವನ್ನು ದಿನಾಂಕ: 01/05/1996ರಿಂದ ಅನ್ವಯಿಸುವಂತೆ ಶೇಕಡ 2ಕ್ಕೆ ಹೆಚ್ಚಿಸಲು ನಿರ್ಧರಿಸಲಾಯಿತು. ಆದಾಗ್ಯೂ ಮಾರುಕಟ್ಟೆ ಶುಲ್ಕವನ್ನು ಶೇಕಡ 1ರಂತೆ ಮಾತ್ರ ವಸೂಲು ಮಾಡಲು ಎಲ್ಲಾ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ರವರು ಸೂಚಿಸಿದ್ದರು.

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 30.09.2002ರ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ನಿರ್ದೇಶಕರ ಪತ್ರ ಮತ್ತು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 18.11.2002ರ ಕೃಷಿ ಮಾರಾಟ ಇಲಾಖೆಯ ನಿರ್ದೇಶಕರ ಪತ್ರದಲ್ಲಿನ ಅಭಿಪ್ರಾಯಗಳನ್ನು ಸಮಗ್ರವಾಗಿ ಸರ್ಕಾರವು ಪರಿಶೀಲಿಸಿದೆ. ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ನಿರ್ದೇಶಕರು ತಮ್ಮ ಪತ್ರದಲ್ಲಿ ಆಗ್ರೋ ಆಹಾರ ಸಂಸ್ಕರಣ ಘಟಕಗಳು ಸಂಸ್ಕರಿಸಿದ ಹುಟ್ಟುವಳಿಗೆ ವಾರ್ಷಿಕ ಕನಿಷ್ಠ ರೂ. 8.00 ಕೋಟಿಗಳಷ್ಟು ಮಾರುಕಟ್ಟೆ ಶುಲ್ಕವನ್ನು ಪಾವತಿಸುತ್ತಿರುವುದಾಗಿ ತಿಳಿಸಿದ್ದು, ಈ ಸಂಬಂಧ ಮಾರುಕಟ್ಟೆ ಸಮಿತಿಗಳ ಸಂಸ್ಕರಿಸಿದ ಹುಟ್ಟುವಳಿಗೆ ಮಾರುಕಟ್ಟೆ ಶುಲ್ಕ ವಿಧಿಸುವುದರಿಂದ ವಿನಾಯ್ತಿ ನೀಡಬೇಕೆಂದು ಕೋರಿರುತ್ತಾರೆ.

ಅತಿ ಮುಖ್ಯವಾಗಿ ಅಕ್ಕಿ, ಮೆಕ್ಕೆಜೋಳ, ಗೋಧಿ, ಬೇಳೆಕಾಳುಗಳು ಹಾಗೂ ಹಣ್ಣು ಮತ್ತು ತರಕಾರಿಗಳನ್ನು ಗುರುತಿಸಿದ್ದು, ಇವುಗಳನ್ನು ಸಂಸ್ಕರಿಸಿದ ಹುಟ್ಟುವಳಿಗಳ ಮಾರಾಟದಿಂದ ಮಾರುಕಟ್ಟೆ ಸಮಿತಿಗಳಿಗೆ ಸುಮಾರು ರೂ. 10.00 ರಿಂದ ರೂ. 15.00 ಕೋಟಿಗಳು ಮಾರುಕಟ್ಟೆ ಶುಲ್ಕ ಸಂದಾಯವಾಗುತ್ತದೆ. ಸದರೀ ಸಂಸ್ಥೆಗಳಿಗೆ ಮಾರುಕಟ್ಟೆ ಶುಲ್ಕ ವಿನಾಯಿತಿ ನೀಡಿದಲ್ಲಿ ಮಾರುಕಟ್ಟೆ ಸಮಿತಿಗಳಿಗೆ ಆರ್ಥಿಕ ನಷ್ಟ ಉಂಟಾಗುತ್ತದೆ. ಇದರಿಂದ ಮಾರುಕಟ್ಟೆ ಪ್ರಾಂಗಣಗಳಲ್ಲಿ ರೈತರಿಗೆ ಹಾಗೂ ವರ್ತಕ ವರ್ಗದವರಿಗೆ ಮೂಲಭೂತ ಸೌಕರ್ಯ/ಸೌಲಭ್ಯಗಳನ್ನು ಕಲ್ಪಿಸಲು ಸಾಧ್ಯವಾಗದೇ ಪ್ರಾಂಗಣದ ಅಭಿವೃದ್ಧಿ ಕಾರ್ಯಗಳು ಕುಂಠಿತಗೊಳ್ಳುವ ಸಾಧ್ಯತೆ ಹೆಚ್ಚಾಗಿರುತ್ತದೆ. ಅಲ್ಲದೆ ಕೃಷಿ ಹುಟ್ಟುವಳಿಗಳು ಪ್ರಾಂಗಣಕ್ಕೆ ಆವಕವಾಗದೇ ಪ್ರಾಂಗಣದ ಹೊರಗೆ ವ್ಯವಹಾರ ನಡೆಯುವ ಸಂಭವವಿರುತ್ತದೆ. ಆದುದರಿಂದ ಆಗ್ರೋ ಆಹಾರ ಸಂಸ್ಕರಣ ಘಟಕಗಳಿಗೆ ಮಾರುಕಟ್ಟೆ ಶುಲ್ಕ ವಿನಾಯ್ತಿ ನೀಡುವುದು ಸಮಂಜಸವಲ್ಲ ಎಂದು ಅಭಿಪ್ರಾಯಪಡಲಾಗಿದೆ.

ಅದಲ್ಲದೇ ಸನ್ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 10.06.2002 ರಂದು ಜರುಗಿದ ಸಮಾಲೋಚನಾ ಸಭೆಯಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಖರೀದಿಸುವ ಕೃಷಿ ಉತ್ಪನ್ನಗಳಿಗೆ ಕೂಡಲೇ ರೈತರಿಗೆ ಹಣ ಪಾವತಿ ಮಾಡಲು ಅನುಕೂಲವಾಗುವಂತೆ ಸ್ಥಾಪಿಸಲಾಗಿರುವ ಆವರ್ತ ನಿಧಿಯನ್ನು 100.00 ಕೋಟಿ ರೂಪಾಯಿಗಳಿಂದ 400.00 ಕೋಟಿ ರೂಪಾಯಿಗಳಿಗೆ, ಸಾರ್ವಜನಿಕ ಹಿತದೃಷ್ಟಿಯಿಂದ, ಹೆಚ್ಚಿಸುವುದು ಅತ್ಯಂತ ಸೂಕ್ತವೆಂದು ನಿರ್ಧರಿಸಲಾಗಿದ್ದು, ಅದರಂತೆ ಮಾರುಕಟ್ಟೆ ಶುಲ್ಕವನ್ನು ಶೇಕಡಾ 1 ರಿಂದ ಶೇಕಡಾ 2ಕ್ಕೆ ಹೆಚ್ಚಿಸುವ ಅಭಿಪ್ರಾಯ ರೂಪಿತವಾಗಿದ್ದಿತು. ಮಾರುಕಟ್ಟೆ ಶುಲ್ಕವನ್ನು ಶೇಕಡಾ 1ರಿಂದ 2ಕ್ಕೆ ಹೆಚ್ಚಿಸಿದಲ್ಲಿ ಮಾರುಕಟ್ಟೆ ಸಮಿತಿಗಳ ಆದಾಯದಲ್ಲಿ ಗಣನೀಯ ಹೆಚ್ಚಳ ಉಂಟಾಗಿ ಆವರ್ತ ನಿಧಿಗೆ ಹೆಚ್ಚಿನ ವಂತಿಗೆಯನ್ನು ನೀಡಲು ಮತ್ತು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಸಾಧ್ಯವಾಗುತ್ತದೆ. ಈ ಬಗ್ಗೆ ಸನ್ಮಾನ್ಯ ಮುಖ್ಯಮಂತ್ರಿಗಳವರು ಮಾರ್ಚ್ 2003ರಲ್ಲಿ ನೀಡಿದ ಆಯವ್ಯಯ ಭಾಷಣದಲ್ಲಿ ಈ ಕೆಳಕಂಡಂತೆ ಹೇಳಿರುತ್ತಾರೆ:

> ಆವರ್ತ ನಿಧಿಗೆ ಸ್ವಲ್ಪ ಭಾಗವನ್ನು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಮೂಲಕ ಕೊಡುಗೆಯಾಗಿ ಪಡೆಯಾಗುವುದು. ಆವರ್ತ ನಿಧಿಗೆ ಸಂಪನ್ಮೂಲ ಒಗ್ಗೂಡಿಸಲು ಮಾರುಕಟ್ಟೆ ಶುಲ್ಕವನ್ನು ಶೇಕಡ 1ರಿಂದ ಶೇಕಡ 1.5ಕ್ಕೆ ಏರಿಸಲಾಗುವುದು. ಇದರಿಂದಾಗಿ ಆವರ್ತ ನಿಧಿಯ ಮೊತ್ತವು 200 ಕೋಟಿ ರೂ.ಗಳಿಗೆ ಏರಲಿದ್ದು ಮಾರುಕಟ್ಟೆ ಬೆಂಬಲ ಕಾರ್ಯಾಚರಣೆಯ ವಹಿವಾಟನ್ನು 500 ಕೋಟಿ ರೂ.ಗಳವರೆಗೆ ನಿರ್ವಹಿಸಬಹುದಾಗಿದೆ.

ಮೇಲ್ಕಂಡ ಸಂದರ್ಭದಲ್ಲಿ ಈ ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿದ ಸರ್ಕಾರವು ಕೃಷಿ ಮಾರುಕಟ್ಟೆ ಶುಲ್ಕವನ್ನು ಶೇಕಡ 1 ರಿಂದ ಶೇಕಡ 1.5ಕ್ಕೆ ಹೆಚ್ಚಿಸುವುದು ಅತ್ಯಂತ ಸೂಕ್ತವೆಂದು ಪರಿಗಣಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 277 ಎಂಆರ್ಇ 2002, (ಭಾಗ) ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ಆವರ್ತನಿಧಿಗೆ ಹೆಚ್ಚಿನ ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಅನುಕೂಲವಾಗುವಂತೆ, ಸಾರ್ವಜನಿಕ ಹಿತದೃಷ್ಟಿಯಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಕಾಯ್ದೆ 1966ರ ಕಲಂ 65ರ ಉಪಕಲಂ (2)ರನ್ವಯ ಕೃಷಿ ಮಾರುಕಟ್ಟೆ ಶುಲ್ಕವನ್ನು, ತಕ್ಷಣದಿಂದ ಅನ್ವಯಿಸುವಂತೆ ಮತ್ತು ಮುಂದಿನ ಆದೇಶದವರೆಗೆ ಶೇಕಡಾ 1.5 ರಷ್ಟು ವಸೂಲಿ ಮಾಡಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 661 ವೆಚ್ಚ-2/2003, ದಿನಾಂಕ: 23.06.2003ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ಜಾಪಾಲಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್. 1268

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಶ್ರೀ ರಮೇಶ್ ಎಸ್. ಮಂಠಾಳೆ, ಪದವೀಧರ ಇಂಜಿನಿಯರ್ (ಎಂ.ಆರ್.ಇ.) ಇವರು ದಿನಾಂಕ: 31.07.2003ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 93 ಪಿಡಬ್ಲ್ಯೂಸಿ 2002, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್, 2003**

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್ಎಲ್ಸಿ:94 ದಿನಾಂಕ:29.09.94.
2) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 90 ದಿನಾಂಕ: 02.12.94.
3) ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯೂಡಿ 201 ಪಿಡಬ್ಲ್ಯೂಸಿ 95, ದಿನಾಂಕ: 02.07.94, 01.09.95 ಮತ್ತು 13.09.95.
4) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 32 ಪಿಡಬ್ಲ್ಯೂಸಿ 95 (ಭಾಗ), ದಿನಾಂಕ: 20.08.96.
5) ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ:ಗ್ರಾಅಇಂಇ:ಸಿ-14(ಎ) ಮಾ.ವೇ.ಸಿ: ಸಕ್ರಮ: 2002-03:5691: ದಿನಾಂಕ: 29.11.2002.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 1038:90 ಮತ್ತು 297:91ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ: 01.07.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸಿ.ಆ.ಸು. ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ: (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ: 01.07.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ: 29.09.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ: 29.09.94ರ ಆದೇಶದಲ್ಲಿ ಕಂಡಿಕೆ 6 ಮತ್ತು 7ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್ಎಲ್ಸಿ 94 ದಿನಾಂಕ: 29.09.94 ಹಾಗೂ ಪಿಡಬ್ಲ್ಯೂಡಿ 32 ಪಿಡಬ್ಲ್ಯೂಸಿ 95(ಭಾಗ) ದಿನಾಂಕ: 20.08.96ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಸಹಾಯಕ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

### ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ: 01.07.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್ಎಲ್ಸಿ: 94 ದಿನಾಂಕ: 29.09.94 ಹಾಗೂ ಪಿಡಬ್ಲ್ಯೂಡಿ 32 ಪಿಡಬ್ಲ್ಯೂಸಿ 95 (ಭಾಗ) ದಿನಾಂಕ: 20.08.96ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ರಮೇಶ್ ಎಸ್. ಮಂಠಾಳೆ, ಪದವೀಧರ ಇಂಜಿನಿಯರ್ | 23.04.91<br>31.07.93 | 30.07.2003 | 31.07.2003 | ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ ಗ್ರಾ.ಅ.ಇಂ. ಘಟಕ ಗುಣ ನಿಯಂತ್ರಣ ವಿಭಾಗ, ಗುಲ್ಬರ್ಗಾ. |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.09.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ್**

ಪೀಠಾಧಿಕಾರಿ,

ಪಿ.ಆರ್. 1269 ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

**ವಿಷಯ:** ಶ್ರೀ ವಿಜಯಕುಮಾರ್ ಬಿ. ಪಟ್ಟಣಿ, ಪದವೀಧರ ಇಂಜಿನಿಯರ್ (ಎಂ.ಆರ್.ಇ) ಇವರು ದಿನಾಂಕ:01.01.2003ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 94 ಪಿಡಬ್ಲ್ಯೂಸಿ 2002, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್, 2003**

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ:29.09.94.
2) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 90 ದಿನಾಂಕ: 02.12.94.
3) ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯೂಡಿ 201 ಪಿಡಬ್ಲ್ಯೂಸಿ 95, ದಿನಾಂಕ: 02.07.94, 01.09.95 ಮತ್ತು 13.09.95.
4) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 32 ಪಿಡಬ್ಲ್ಯೂಸಿ 95 (ಭಾಗ), ದಿನಾಂಕ: 20.08.96.
5) ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ:ಗ್ರಾಅಇಂಇ:ಸಿ-14(ಎ) ಮಾ.ವೇ.ಸಿ: ಸಕ್ರಮ: 2002-03:5690: ದಿನಾಂಕ: 29.11.2002.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90 1038:90 ಮತ್ತು 297:91ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ: 01.07.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ: (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ: 01.07.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ: 29.09.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ: 29.09.94ರ ಆದೇಶದಲ್ಲಿ ಕಂಡಿಕೆ 6 ಮತ್ತು 7ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು. ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ: 29.09.94 ಹಾಗೂ ಪಿಡಬ್ಲ್ಯೂಡಿ 32 ಪಿಡಬ್ಲ್ಯೂಸಿ 95(ಭಾಗ) ದಿನಾಂಕ: 20.08.96ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಸಹಾಯಕ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ: 01.07.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ: 94 ದಿನಾಂಕ: 29.09.94 ಹಾಗೂ ಪಿಡಬ್ಲ್ಯೂಡಿ 32

ಪಿಡಬ್ಲ್ಯೂಸಿ 95 (ಭಾಗ) ದಿನಾಂಕ: 20.08.96ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ವಿಜಯಕುಮಾರ್ ಬಿ. ಪಟ್ಟಣೆ, ಪದವೀಧರ ಇಂಜಿನಿಯರ್ | 12.03.1991 01.01.1993 | 31.12.2002 | 01.01.2003 | ಯೋಜನೆ ಮತ್ತು ವಿನ್ಯಾಸ ಘಟಕ, ಯಾಂತ್ರಿಕ ಉಪ ವಿಭಾಗ, ಬೀದರ್. |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.09.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ್**

ಪೀಠಾಧಿಕಾರಿ,

ಪಿ.ಆರ್. 1270 ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

**ವಿಷಯ:** ಶ್ರೀ ಅರುಣ್‌ಕುಮಾರ್ ಮಹಾಶೆಟ್ಟಿ, ಪದವೀಧರ ಇಂಜಿನಿಯರ್ (ಎಂ.ಆರ್.ಇ) ಇವರು ದಿನಾಂಕ:31.12.1999ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 31 ಪಿಡಬ್ಲ್ಯೂಸಿ 2003, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್, 2003**

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ:29.09.94.
2) ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 90 ದಿನಾಂಕ: 02.12.94.
3) ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯೂಡಿ 201 ಪಿಡಬ್ಲ್ಯೂಸಿ 95, ದಿನಾಂಕ: 02.07.94, 01.09.95 ಮತ್ತು 13.09.95.
4) ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ:ಗ್ರಾಅಇಂಇ:ಸಿ-14(ಎ) ಮಾ.ವೇ.ಸಿ: ಸಕ್ರಮ: 2003-04:959: ದಿನಾಂಕ: 19.05.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ: 01.07.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ: (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ: 01.07.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ: 29.09.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ: 29.09.94ರ ಆದೇಶದಲ್ಲಿ ಕಂಡಿಕೆ 6 ಮತ್ತು 7ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು. ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ: 29.09.94 ಹಾಗೂ ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 90 ದಿನಾಂಕ: 02.12.94ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ

ಕೆಲಸ ಮಾಡುತ್ತಿರುವ ಸಹಾಯಕ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ: 01.07.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ: 94 ದಿನಾಂಕ: 29.09.94 ಹಾಗೂ ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 94, ದಿನಾಂಕ: 02.12.94ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ಅರುಣ್‌ಕುಮಾರ್ ಮಹಾಶೆಟ್ಟಿ, ಪದವೀಧರ ಇಂಜಿನಿಯರ್ | 01.03.1989 | ಡಿಸೆಂಬರ್, 1999 | 31.12.1999 | ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಗುಲ್ಬರ್ಗಾ. |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.09.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ್**

ಪೀಠಾಧಿಕಾರಿ,

ಪಿ.ಆರ್. 1271 ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಆರ್ಥಿಕ ಇಲಾಖೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳ ಮುಂದುವರಿಕೆ ದಿನಾಂಕ:05.11.2003 ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 45 ಎಸ್‌ಜಿಒ 2000, ದಿನಾಂಕ: 30.03.2001.
2) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 45 ಎಸ್‌ಇಎಂ 2000, ದಿನಾಂಕ:04.05.2001.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 5 ಸಸಿವಿ 2002, ದಿನಾಂಕ:04.03.2002.
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸಸಿವಿ 2002, ದಿನಾಂಕ: 22.05.2002.
5) ಅಧಿಸೂಚನೆ ಸಂಖ್ಯೆ: ಡಿಪಿಎಆರ್ 284 ಎಸ್‌ಜಿಒ 2002 ದಿನಾಂಕ: 19.10.2002.
6) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 67 ಸಸಿವಿ 2002 ದಿನಾಂಕ: 21.11.2002.
7) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 70 ಸಸಿವಿ 2002, ದಿನಾಂಕ: 26.03.2003.
8) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 3 ಸಿಎಎಂ 2002, ದಿನಾಂಕ: 04.09.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿ ಒಂದು ವೇತನ ಶ್ರೇಣಿ ರಹಿತ ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಹುದ್ದೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

ಕ್ರಮಸಂಖ್ಯೆ (2)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಕಛೇರಿಗೆ ಒಂದು ವರ್ಷದ ಅವಧಿಗೆ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

ಅ) ಜಂಟಿ ನಿರ್ದೇಶಕರು, ಲೆಕ್ಕಪತ್ರ : 1
(ರೂ. 10620-14960)
ಆ) ಅಕೌಂಟ್ಸ್ ಸೂಪರಿಂಟೆಂಡೆಂಟ್ : 1
ಇ) ಶೀಘ್ರಲಿಪಿಗಾರರು : 1
ಈ) ಗ್ರೂಪ್ 'ಡಿ' : 1

ಕ್ರಮಸಂಖ್ಯೆ (3)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ, ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಇವರ ಆಪ್ತ ಶಾಖೆಗೆ ದಿನಾಂಕ:29.03.2002ರವರೆಗಿನ ಅವಧಿಗೆ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದೆ.

| | | |
|---|---|---|
| ಅ) | ಪತ್ರಾಂಕಿತ ಆಪ್ತ ಸಹಾಯಕರು ಹಿರಿಯ ಶೀಘ್ರಲಿಪಿಗಾರ | : 1 |
| ಆ) | ಕಿರಿಯ ಸಹಾಯಕ | : 1 |
| ಇ) | ದಲಾಯತ್ | : 1 |

ಕ್ರಮಸಂಖ್ಯೆ (6)ರಲ್ಲಿರುವ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ದಿನಾಂಕ: 04.11.2003ರವರೆಗೆ ಮುಂದುವರೆಸಲಾಗಿದೆ.

ಕ್ರಮಸಂಖ್ಯೆ (7)ರಲ್ಲಿರುವ ದಿನಾಂಕ: 26.03.2003ರ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಹುದ್ದೆಯನ್ನು ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ ಎಂದು ಪುನರ್ ಪದನಾಮೀಕರಿಸಲಾಗಿದೆ.

ಪ್ರಸ್ತುತ ಕಂಟ್ರೋಲರ್ (ಲೆಕ್ಕ ನಿರ್ವಹಣೆ) ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ ಇವರು ಕ್ರಮ ಸಂಖ್ಯೆ (8)ರಲ್ಲಿ ಓದಲಾದ ದಿನಾಂಕ: 04.09.2003ರ ಅನಧಿಕೃತ ಟಿಪ್ಪಣಿಯಲ್ಲಿ ಈ ಎಲ್ಲಾ ಹುದ್ದೆಗಳನ್ನು ದಿನಾಂಕ: 05.11.2003 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 78, ಸಸಿವಿ 2003, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್, 2003**

ಕರ್ನಾಟಕ ಸರ್ಕಾರ ಸಚಿವಾಲಯದ, ಆರ್ಥಿಕ ಇಲಾಖೆಯ ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 05.11.2003ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1) | ಪತ್ರಾಂಕಿತ ಆಪ್ತ ಸಹಾಯಕರು: ಹಿರಿಯ ಶೀಘ್ರಲಿಪಿಗಾರ | : 1 |
| 2) | ಕಿರಿಯ ಸಹಾಯಕ | : 1 |
| 3) | ದಲಾಯತ್ | : 1 |
| 4) | ಜಂಟಿ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಈಗ ಅಪರ ನಿಯಂತ್ರಕರು | : 1 |
| 5) | ಅಕೌಂಟ್ಸ್ ಸೂಪರಿಂಟೆಂಡೆಂಟ್ | : 1 |
| 6) | ಶೀಘ್ರಲಿಪಿಗಾರರು | : 1 |
| 7) | ಗ್ರೂಪ್ ಡಿ | : 1 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ನೀಡಿರುವ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1272 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಕಾನೂನು ಸಚಿವಾಲಯ

**ವಿಷಯ:** ಹಾಸನ ಜಿಲ್ಲೆ, ಚೆನ್ನರಾಯಪಟ್ಟಣ ಕಂದಾಯ ತಾಲ್ಲೂಕು ಕ್ಷೇತ್ರದ 2 ಹೆಚ್ಚುವರಿ ನೋಟರಿ ಹುದ್ದೆಗಳ ನೇಮಕಾತಿ ಕುರಿತು.

**ಓದಲಾಗಿದೆ:** 1) ದಿನಾಂಕ: 19.05.03ರ ಸರ್ಕಾರಿ ಆದೇಶ ಸಂಖ್ಯೆ:ಲಾ 211 ಎಲ್‌ಸಿಎಲ್ 02.

2) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರ ಪತ್ರ ಸಂಖ್ಯೆ: ಆಡಳಿತ 2905-2003, ದಿನಾಂಕ:29.08.03.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 19.05.03ರ ಸರ್ಕಾರಿ ಆದೇಶದಲ್ಲಿ ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣ ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ 2 ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿದೆ.

ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿರುವ ನೋಟರಿ ಹುದ್ದೆಗೆ ಮೇಲೆ ಓದಲಾಗಿರುವ (2) ದಿನಾಂಕ:29.08.03ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನರವರು ಅರ್ಜಿಯನ್ನು ಆಹ್ವಾನಿಸಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 211 ಎಲ್‌ಸಿಎಲ್ 02, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಈ ಕೆಳಕಂಡ ವಕೀಲರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಚೆನ್ನರಾಯಪಟ್ಟಣ ಕಂದಾಯ ತಾಲ್ಲೂಕು ಕ್ಷೇತ್ರದ ಹೆಚ್ಚುವರಿ ನೋಟರಿಗಳನ್ನಾಗಿ ನೇಮಿಸಿದೆ.

(1) ಶ್ರೀ ಎಸ್.ಎಸ್. ಪರಮೇಶ್ವರ, ವಕೀಲರು, ಎಸ್.ಬಿ.ಎಂ. ಎದುರು ಬಿ.ಎಂ. ರಸ್ತೆ, ಚನ್ನರಾಯಪಟ್ಟಣ, ಹಾಸನ ಜಿಲ್ಲೆ.

(2) ಶ್ರೀ ಎಸ್.ಆರ್. ಶ್ರೀನಿವಾಸ್, ವಕೀಲರು, ಆರ್.ಕೆ. ಲೇಔಟ್ ಕಂದಾಯ ಸಚಿವರ ಮನೆ ಹಿಂಭಾಗ, ಚನ್ನರಾಯಪಟ್ಟಣ, ಹಾಸನ ಜಿಲ್ಲೆ.

ಮೇಲೆ ಹೆಸರಿಸಲಾಗಿರುವ ವಕೀಲರುಗಳು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯಪರಿಪಾಲನೆ 501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ. 1000, (ರೂಪಾಯಿ ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶ್ರೀಧರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-2).

ಪಿ.ಆರ್. 1273

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಕರ್ನಾಟಕದ ಪುರಾತತ್ವದಲ್ಲಿ ಸಂಶೋಧನೆ ಕೈಗೊಂಡು ಪಿ.ಎಚ್.ಡಿ. ಅಥವಾ ಡಿ.ಲಿಟ್ ಪದವಿ ಪಡೆದುಕೊಂಡ ಸಂಶೋಧಕರಿಗೆ ಪ್ರೋತ್ಸಾಹ ಧನ ನೀಡುವ ಕುರಿತು.

**ಪ್ರಸ್ತಾವನೆ:**

ಕರ್ನಾಟಕದ ಪುರಾತತ್ವದಲ್ಲಿ ಸಂಶೋಧನೆ ಕೈಗೊಳ್ಳುವ ಸಂಶೋಧಕರಿಗೆ ಪ್ರೋತ್ಸಾಹಿಸಲು ಸರ್ಕಾರ ಉದ್ದೇಶಿಸಿದ್ದು, ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯಲ್ಲಿ ಉಪ ನಿರ್ದೇಶಕರಾಗಿ ಸೇವೆ ಸಲ್ಲಿಸಿ ಕರ್ನಾಟಕ ಪುರಾತತ್ವದಲ್ಲಿ ಗಣನೀಯ ಸಂಶೋಧನೆ ಕೈಗೊಂಡು ಅನೇಕ ಪ್ರಕಟಣೆಗಳನ್ನು ಪ್ರಕಟಿಸಿ ಇಲಾಖೆಯ ರಚನಾತ್ಮಕ ಕಾರ್ಯಗಳಲ್ಲಿ ಸಕ್ರೀಯವಾಗಿ ಭಾಗವಹಿಸಿ ದಿವಂಗತರಾದ ಡಾ: ಸಿ.ಎಸ್. ಪಾಟೀಲ್ ಅವರ ಸ್ಮರಣಾರ್ಥ, ಕರ್ನಾಟಕ ಪುರಾತತ್ವದಲ್ಲಿ ಸಂಶೋಧನೆ ಕೈಗೊಂಡು ಕರ್ನಾಟಕ ಸರ್ಕಾರದ ಅಂಗೀಕೃತ ವಿಶ್ವವಿದ್ಯಾನಿಲಯಗಳಿಂದ ಪಿ.ಎಚ್.ಡಿ. ಅಥವಾ ಡಿ. ಲಿಟ್ ಪದವಿ ಪಡೆದುಕೊಂಡ ಸಂಶೋಧಕರಿಗೆ ಪ್ರೋತ್ಸಾಹ ಧನ ನೀಡಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 147 ಕೆಎಂಯು 2003, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕದ ಪುರಾತತ್ವದಲ್ಲಿ ಸಂಶೋಧನೆ ಕೈಗೊಂಡು ಕರ್ನಾಟಕ ಸರ್ಕಾರದ ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಪಿ.ಎಚ್.ಡಿ. ಅಥವಾ ಡಿ. ಲಿಟ್ ಪದವಿ ಪಡೆದುಕೊಂಡ ಸಂಶೋಧಕರಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು 2003-04ನೇ ಸಾಲಿನಿಂದ ಪ್ರೋತ್ಸಾಹ ಧನ ನೀಡಲು ಸರ್ಕಾರ ಆದೇಶಿಸುತ್ತದೆ.

**ಷರತ್ತುಗಳು:**

1) ಕರ್ನಾಟಕ ಪುರಾತತ್ವ ಅಂದರೆ ಕರ್ನಾಟಕದ ಪ್ರಾ. ಗೈತಿಹಾಸಿಕ ಪುರಾತತ್ವ, ಐತಿಹಾಸಿಕ ಪುರಾತತ್ವ, ಪ್ರಾಚೀನ ಕಲೆ ಮತ್ತು ವಾಸ್ತು ಶಿಲ್ಪ, ಪ್ರಾಚೀನ ಶಾಸನ ಶಾಸ್ತ್ರ, ಪ್ರಾಚೀನ ನಾಣ್ಯ ಶಾಸ್ತ್ರದಲ್ಲಿ ಅಥವಾ ಕರ್ನಾಟಕ ಪ್ರಾಚ್ಯವಸ್ತು ಸಂಗ್ರಹಾಲಯಗಳ ಕುರಿತು ಸಂಶೋಧನೆ ಕೈಗೊಂಡು ಕರ್ನಾಟಕ ಸರ್ಕಾರದ ಅಂಗೀಕೃತ ವಿಶ್ವವಿದ್ಯಾನಿಲಯಗಳಿಂದ ಪಿ.ಎಚ್.ಡಿ. ಅಥವಾ ಡಿ. ಲಿಟ್ ಪದವಿ ಪಡೆದುಕೊಂಡಿರತಕ್ಕದ್ದು.
2) ಸಂಶೋಧಕರು ಕೈಗೊಂಡ ಸಂಶೋಧನೆ ಮೂಲ ಸಂಶೋಧನೆಯಾಗಿರತಕ್ಕದ್ದು ಮತ್ತು ಈ ಕುರಿತು ವಿಶ್ವವಿದ್ಯಾನಿಲಯದಿಂದ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.
3) ಪಿ.ಎಚ್.ಡಿ. ಅಥವಾ ಡಿ. ಲಿಟ್ ಪದವಿ ಪಡೆದ ಕುರಿತು ಅಧಿಸೂಚನೆ ಪ್ರಮಾಣ ಪತ್ರ ಮತ್ತು ಪದವಿ ಪಡೆದುಕೊಳ್ಳಲು ವಿಶ್ವವಿದ್ಯಾನಿಯಲಕ್ಕೆ ಸಲ್ಲಿಸಿದ ಮಹಾ ಪ್ರಬಂಧದ ಪ್ರತಿಯನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಗೆ ಸಲ್ಲಿಸುವುದು.
4) ಪ್ರೋತ್ಸಾಹ ಧನದ ಮೊತ್ತ ರೂ. 10,000-(ರೂಪಾಯಿ ಹತ್ತು ಸಾವಿರ ಮಾತ್ರ)ವಾಗಿರತಕ್ಕದ್ದು.
5) ಒಬ್ಬ ಸಂಶೋಧಕರು ಒಮ್ಮೆ ಮಾತ್ರ ಪ್ರೋತ್ಸಾಹ ಧನ ಪಡೆದುಕೊಳ್ಳಲು ಅರ್ಹರು.
6) ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ನಿರ್ದೇಶಕರು, ಸಂಶೋಧಕರು ಸಲ್ಲಿಸಿದ ಮಹಾ ಪ್ರಬಂಧದ ಪ್ರತಿಯನ್ನು ಇಲಾಖೆಯ ಗ್ರಂಥಾಲಯದಲ್ಲಿ ಕಾಯ್ದಿರಿಸತಕ್ಕದ್ದು.
7) ಈ ಯೋಜನೆ 2003-04ನೇ ಸಾಲಿನಿಂದ ಜಾರಿಗೆ ಬರತಕ್ಕದ್ದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-103-0-02 ಪ್ರಾಚ್ಯವಸ್ತು ಇಲಾಖೆಯ ಯೋಜನೆಗಳು (ಯೋಜನೆ) ಅಡಿಯಲ್ಲಿ ಒದಗಿಸಲಾದ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ-1ಟಿಎಫ್‌ಪಿ-96, ದಿನಾಂಕ: 10.07.96ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಿದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ವಿಶಾಲಾಕ್ಷಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್. 1274

## ENERGY SECRETARIAT

**Subject:** Appointment of Finance Directors to Electricity Supply Companies (Escoms).

**Read:** (1) Government Order No. DE 33 PSR 2003, Dated: 6th June 2003.

**Preamble:**

In the Government Order Dated: 6th June 03 read at (1) above, a Selection Committee was constituted for Selection of Director Finance to each of the Escoms, comprising of Principal Secretary to Government, Energy Department as Chairman, MD, KPTCL and MDs of Escoms as members and respective Company secretaries as conevenors.

It has been now decided to reconstitute the Selection Committee. Hence the following Order.

**Government Order No. DE 33 PSR 2003, Bangalore, Dated: 29th September, 2003**

Under the Circumstances explained in the Preamble, Government are pleased to accord approval for the following:

a) To re-constitute the Selection Committee for selection of Finance Directors to each of the Escoms with the following members viz;

| | | |
|---|---|---|
| i) | Special Secretary to Government, (Power Reforms) Energy Department. | Chairman |
| ii) | Managing Directors Escoms | Members |
| iii) | Company Secretary, BESCOM | Convenor |

b) Committee to finalise the selection process based on interview or any other mode as deemed fit by it on or before 25th October, 2003.

By Order and in the Name of the Governor of Karnataka,

**K.L. JAYARAM**

Under Secretary to Government,

Energy Department.

PR-1275

## RURAL DEVELOPMENT AND PANCHAYAT RAJ SECRETARIAT

**Ref:** PRESK State Level Monitoring Committee meeting proceedings dated: 11.08.2003 held under the Chair.

**Preamble:**

In the meeting held on Dated: 11.08.2003 under the Chairmanship of the Secretary, Rural Development & Panchayat Raj Department, it was suggested and resolved to include Chief Engineer (Ele), O & M zone, Chitradurga as member of both PRESK State Level Monitoring Committee and Technical committee. And also to include Additional Director, Department of Mines & Zeology, Khanija Bhavan, Race Course Road, as member of PRESK State Level Monitoring Committee.

**Government Order No. RDP 6 REC 2003, Bangalore, Dated: 30th September, 2003**

In partial modification of the G.O. No.RDP 114 GPA 2003 Dated: 25.03.2003 the following officers have been included as members of PRESK Committee with immediate effect.

1. Chief Engineer (Ele), O & M zone, Chitradurga as member for both PRESK State Level Monitoring Committee and Technical committee.
2. Additional Director, Mines & Zeology, Khanija Bhavan, Race Course Road, Bangalore as member of PRESK State Level Monitoring Committee.

By Order and in the Name of the Governor of Karnataka,

**M.G. VIJAYAKUMAR**

Director (REP) & Ex-officio,

Deputy Secretary to Government,

Rural Development & Panchayat Raj Department.

PR-1276

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಶ್ರೀ ಬಿ.ಎಂ. ಹನುಮಂತರೆಡ್ಡಿ, ಸಕಾಇಂ, ಇವರಿಗೆ ಕಡ್ಡಾಯ ನಿರೀಕ್ಷಣಾ ಅವಧಿ ಹಾಗೂ ಪರಿವರ್ತಿತ ರಜೆ ಮಂಜೂರು ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಆರ್‌ಡಿಇಡಿ, ಬೆಂಗಳೂರು, ಇವರ ಪತ್ರ ಸಂ:ಮುಇಂ:ಗ್ರಾಅಇಂಇ:ಬೆಂ:ಸಿ-10:02-03, ದಿನಾಂಕ: 28.03.03 ಮತ್ತು 07.04.03.

**ಪ್ರಸ್ತಾವನೆ:**

ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರಗಳಲ್ಲಿ ಶ್ರೀ ಬಿ.ಎಂ. ಹನುಮಂತರೆಡ್ಡಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರಿಗೆ ದಿನಾಂಕ: 07.06.02ರಿಂದ 19.06.02ರವರೆಗಿನ

ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಹಾಗೂ ದಿನಾಂಕ:20.06.02 ರಿಂದ 03.07.02ರವರೆಗಿನ ಪರಿವರ್ತಿತ ರಜೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸದರಿಯವರು ದಿನಾಂಕ: 07.06.02ರಂದು ಅವರು ಕರ್ತವ್ಯ ನಿರ್ವಹಿಸುತ್ತಿದ್ದ ಜಾಗದಿಂದ ಬಿಡುಗಡೆ ಹೊಂದಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಲ್ಲಿ ಹಾಜರಾಗಿ ಸ್ಥಳ ನಿಯುಕ್ತಿ ಆದೇಶ ನಿರೀಕ್ಷಿಸಿರುವುದಿಲ್ಲ. ಆದಕಾರಣ ಅವರಿಗೆ ಈ ಅವಧಿಗೆ ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಪರಿಗಣಿಸಲು ಬರುವುದಿಲ್ಲ. ಬದಲಿಗೆ ದಿನಾಂಕ: 07.06.02 ರಿಂದ 03.07.02ರವರೆಗಿನ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆಯೆಂದು ಮಂಜೂರು ಮಾಡಲು ತೀರ್ಮಾನಿಸಿದೆ. ಕಾರಣ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 142 ಸೇಶಿಕಾ 2002, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ತಿಳಿಸಿರುವ ಕಾರಣಗಳಿಂದಾಗಿ ಶ್ರೀ ಬಿ.ಎಂ. ಹನುಮಂತರೆಡ್ಡಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರಿಗೆ ದಿನಾಂಕ: 07.06.02ರಿಂದ 03.07.02ರವರೆಗಿನ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆಯೆಂದು ಮಂಜೂರು ಮಾಡಲು ಆದೇಶಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಅನಧಿಕೃತ ಟಿಪ್ಪಣಿ ಸಂ: ಗ್ರಾಅಪ 236:ಆಂಆಸೇ 03 ದಿನಾಂಕ: 09.07.03ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಪಿ.ಆರ್. 1277 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಟಿ.ಎಸ್. ಪಾರ್ಥಸಾರಥಿ, ಹಿಂದಿನ ತಹಶೀಲ್ದಾರ್, ಶ್ರೀರಂಗಪಟ್ಟಣ ತಾಲ್ಲೂಕು, ಹಾಲಿ ನಿವೃತ್ತರು, ಶ್ರೀ ಎಸ್.ಕೆ. ಕರಿಯಪ್ಪ, ಪ್ರ.ದ.ಸ. ಮತ್ತು ಶ್ರೀ ಮರಿಸ್ವಾಮಿ, ಗ್ರಾಮ ಲೆಕ್ಕಿಗ, ತಾಲ್ಲೂಕು ಕಛೇರಿ, ಶ್ರೀರಂಗಪಟ್ಟಣ ತಾಲ್ಲೂಕು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ಇವರುಗಳನ್ನು ಆರೋಪ ಮುಕ್ತರನ್ನಾಗಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ: 30.08.2002ರ ಸರ್ಕಾರಿ ಆದೇಶ ಸಂಖ್ಯೆ:ಕಂಇ 40 ಎಡಿಇ 2000.

2) ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಕ್ಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ: 06.03.03ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಮಂಡ್ಯ ಜಿಲ್ಲೆ ಶ್ರೀರಂಗಪಟ್ಟಣ ತಾಲ್ಲೂಕು, ಅರೆಕೆರೆ ಹೋಬಳಿ, ಹಂಗರಹಳ್ಳಿ ಗ್ರಾಮದ ಸ.ನಂ. 125ರಲ್ಲಿ ಮೈಸೂರಿನ ನಿವಾಸಿಯಾದ ಶ್ರೀ ಎನ್. ಪುಟ್ಟಸ್ವಾಮಿ ಎಂಬುವವರಿಗೆ ಶ್ರೀ ಚಾಮುಂಡೇಶ್ವರಿ ಜೆಲ್ಲಿ ತಯಾರಿಕ ಉದ್ಯಮದ ಹೆಸರಿನಲ್ಲಿ ಅಕ್ರಮ ಗಣಿಗಾರಿಕೆ ನಡೆಸುತ್ತಿದ್ದು ಅದನ್ನು ನಡೆಸಲು ಪರವಾನಗಿ ಪಡೆದಿರುತ್ತಾರೆಯೇ ಹಾಗೂ ಕಾಲಕಾಲಕ್ಕೆ ಅದನ್ನು ನವೀಕರಣಗೊಳಿಸಲಾಗುತ್ತಿದೆಯೇ ಎಂಬ ಬಗ್ಗೆ ಪರಿಶೀಲಿಸದೆ ಅಕ್ರಮ ಗಣಿಗಾರಿಕೆ ನಡೆಸಲು ಅವಕಾಶ ಮಾಡಿಕೊಟ್ಟು ಅಲ್ಲಿ ಕೆಲಸ ಮಾಡುತ್ತಿರುವ ಕೆಲಸಗಾರರನ್ನು ಜೀತದ ಆಳುಗಳಂತೆ ದುಡಿಸಿಕೊಳ್ಳುತ್ತಿದ್ದ ಹಾಗೂ ಅವರುಗಳನ್ನು ಅಮಾನುಷವಾಗಿ ನೋಡಿಕೊಳ್ಳುತ್ತಿದ್ದನ್ನು ಗಮನಿಸದೆ, ಸ್ಥಳ ಪರಿಶೀಲನೆ ಮಾಡದೆ, ಸಕಾಲಿಕ ನಿವಾರಣಾ ಕ್ರಮ ವಹಿಸುವಲ್ಲಿ ಕರ್ತವ್ಯಲೋಪ ಎಸಗಿರುವರೆಂಬ ಆಪಾದನೆಗಳ ಮೇಲೆ ಈ ಕೆಳಕಂಡ ಅಧಿಕಾರಿ:ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

**ಶ್ರೀಯುತರು:**

1) ಟಿ.ಎಸ್. ಪಾರ್ಥಸಾರಥಿ, ಹಿಂದಿನ ತಹಶೀಲ್ದಾರ್, ಶ್ರೀರಂಗಪಟ್ಟಣ ತಾಲ್ಲೂಕು (ಹಾಲಿ ನಿವೃತ್ತರು)
2) ಎಸ್.ಕೆ. ಕರಿಯಪ್ಪ, ಪ್ರ.ದ.ಸ., ತಾಲ್ಲೂಕು ಕಛೇರಿ, ಶ್ರೀರಂಗಪಟ್ಟಣ.
3) ಮರಿಸ್ವಾಮಿ, ಗ್ರಾಮ ಲೆಕ್ಕಿಗ, ತಾಲ್ಲೂಕು ಕಛೇರಿ, ಶ್ರೀರಂಗಪಟ್ಟಣ.

ವಿಚಾರಣಾಧಿಕಾರಿಗಳು ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 06.03.2003ರ ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಅದರಂತೆ ಶ್ರೀ ಟಿ.ಎಸ್. ಪಾರ್ಥಸಾರಥಿ, ಶ್ರೀ ಎಸ್.ಕೆ. ಕರಿಯಪ್ಪ, ಮತ್ತು ಶ್ರೀ ಮರಿಸ್ವಾಮಿ ಇವರುಗಳ ವಿರುದ್ಧ ಹೊರಿಸಲಾದ ಕರ್ತವ್ಯಲೋಪಗಳನ್ನೊಳಗೊಂಡ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿದ್ದ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಪರಿಶೀಲಿಸಿ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಶ್ರೀ ಟಿ.ಎಸ್. ಪಾರ್ಥಸಾರಥಿ, ಶ್ರೀ ಎಸ್.ಕೆ. ಕರಿಯಪ್ಪ, ಮತ್ತು ಶ್ರೀ ಮರಿಸ್ವಾಮಿ ಇವರುಗಳ ವಿರುದ್ಧದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಇವರುಗಳನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 40 ಎಡಿಇ 2000, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಶ್ರೀ ಟಿ.ಎಸ್. ಪಾರ್ಥಸಾರಥಿ, ಹಿಂದಿನ ತಹಶೀಲ್ದಾರ್, ಶ್ರೀರಂಗಪಟ್ಟಣ ತಾಲ್ಲೂಕು ಹಾಲಿ ನಿವೃತ್ತರು ಶ್ರೀ ಎಸ್.ಕೆ. ಕರಿಯಪ್ಪ, ಪ್ರ.ದ.ಸ., ತಾಲ್ಲೂಕು ಕಛೇರಿ, ಶ್ರೀರಂಗಪಟ್ಟಣ ಮತ್ತು

ಶ್ರೀ ಮರಿಸ್ವಾಮಿ, ಗ್ರಾಮ ಲೆಕ್ಕಿಗ, ತಾಲ್ಲೂಕು ಕಛೇರಿ, ಶ್ರೀರಂಗಪಟ್ಟಣ ಇವರುಗಳ ವಿರುದ್ಧ ದಿನಾಂಕ: 30.08.2002ರ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 40 ಎಡಿಇ 2000(2)ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಶ್ರೀ ಟಿ.ಎಸ್. ಪಾರ್ಥಸಾರಥಿ, ಶ್ರೀ ಎಸ್.ಕೆ. ಕರಿಯಪ್ಪ ಮತ್ತು ಶ್ರೀ ಮರಿಸ್ವಾಮಿ ಇವರುಗಳ ವಿರುದ್ಧ ಈ ಜಂಟಿ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಅವರುಗಳು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಶ್ರೀ ಟಿ.ಎಸ್. ಪಾರ್ಥಸಾರಥಿ, ಹಿಂದಿನ ತಹಶೀಲ್ದಾರ್, ಶ್ರೀರಂಗಪಟ್ಟಣ ತಾಲ್ಲೂಕು, ಹಾಲಿ ನಿವೃತ್ತರು ಇವರನ್ನು ದಿನಾಂಕ: 09.07.2000ರ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 40 ಎಡಿಇ 2000ದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಿದ್ದು ಪುನಃ ಇವರನ್ನು ಅದೇ ಸಮಸಂಖ್ಯೆಯ ದಿನಾಂಕ:27.11.2000ದ ಸರ್ಕಾರಿ ಆದೇಶದಲ್ಲಿ ಅಮಾನತ್ತಿನಿಂದ ಬಿಡುಗಡೆಗೊಳಿಸಿ ಆದೇಶಿಸಿರುವುದರಿಂದ ಇವರ ಈ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲಿದ್ದ ಅವಧಿಯೆಂದು ಪರಿಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1278 ಕಂದಾಯ ಇಲಾಖೆ (ಸೇವೆಗಳು-3).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಶ್ರೀ ಮಹಮ್ಮದ್ ಸೈದುದ್ದೀನ್, ಕಿರಿಯ ಇಂಜಿನಿಯರ್, ಶ್ರೀ ರಷಿಯುದ್ದೀನ್, ಸಹಾಯಕ ಇಂಜಿನಿಯರ್, ಶ್ರೀ ಅಹಮದ್ ಹುಸೇನ್, ಕಿರಿಯ ಇಂಜಿನಿಯರ್, ಶ್ರೀ ಎಸ್.ಎ.ಎಂ. ಖಾದ್ರಿ, ಕಿರಿಯ ಇಂಜಿನಿಯರ್, ಶ್ರೀ ಹೆಚ್.ಎನ್.ಪುನ್ನೆಶೆಟ್ಟಿ, ಸಹಾಯಕ ಇಂಜಿನಿಯರ್, ಶ್ರೀ ವಿಜಯಕುಮಾರ್, ಕಿರಿಯ ಇಂಜಿನಿಯರ್, ಶ್ರೀ ಬಿ. ಸಜ್ಜನಶೆಟ್ಟಿ, ಸಹಾಯಕ ಇಂಜಿನಿಯರ್, ಮತ್ತು ಶ್ರೀ ಮಿಲನ್‌ಕುಮಾರ್, ಕಿರಿಯ ಇಂಜಿನಿಯರ್, ಯಾಂತ್ರಿಕ ಉಪವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಗುಲ್ಬರ್ಗಾ ಇವರಿಗೆ ವಿಧಿಸಲಾಗಿದ್ದ ದಂಡನೆ ಆದೇಶದ ವಿರುದ್ಧ ಸಲ್ಲಿಸಿದ ಅಪೀಲು ಆದೇಶ.

**ಓದಲಾಗಿದೆ:**
1) ಆದೇಶ ಸಂ: ಗ್ರಾಅಪ 119 ಇಎನ್‌ಕ್ಯೂ 96 ದಿನಾಂಕ: 31.12.1999.
2) ಶ್ರೀ ಮಹಮ್ಮದ್ ಸೈದುದ್ದೀನ್, ಕಿಇಂ, ಶ್ರೀ ರಷಿಯುದ್ದೀನ್, ಸಇಂ, ಶ್ರೀ ಅಹಮದ್ ಹುಸೇನ್, ಕಿಇಂ, ಶ್ರೀ ಎಸ್.ಎ.ಎಂ. ಖಾದ್ರಿ, ಕಿಇಂ, ಶ್ರೀ ಹೆಚ್.ಎನ್. ಪುನ್ನೆಶೆಟ್ಟಿ, ಸಇಂ, ಶ್ರೀ ವಿಜಯಕುಮಾರ್, ಕಿಇಂ, ಶ್ರೀ ಬಿ. ಸಜ್ಜನಶೆಟ್ಟಿ, ಸಇಂ, ಮತ್ತು ಶ್ರೀ ಮಿಲನ್‌ಕುಮಾರ್, ಕಿಇಂ, ಇವರು ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಿದ ದಿನಾಂಕ: 25.01.2000 ಮತ್ತು 27.01.2000ರ ಅಪೀಲು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 31.12.99ರ ಆದೇಶದಲ್ಲಿ ಶ್ರೀ ಮಹಮ್ಮದ್ ಸೈದುದ್ದೀನ್, ಕಿರಿಯ ಇಂಜಿನಿಯರ್ ಮತ್ತಿತರರು ಯಾಂತ್ರಿಕ ಉಪವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಗುಲ್ಬರ್ಗ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಎಸಗಿದ್ದರೆನ್ನಲಾದ ಡೀಸೆಲ್ ಆಯಿಲ್ ದುರ್ಬಳಕೆ ಅವ್ಯವಹಾರದ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಇಲಾಖಾ ವಿಚಾರಣೆ ನಡೆಸಿ ಸಾಬೀತಾದ ಆರೋಪಗಳಿಗಾಗಿ ಸದರಿ ನಿಯಮದ ನಿಯಮ 8(iv) (ಎ)ರಂತೆ ಆಪಾದಿತರಿಗೆ ಒಂದು ವಾರ್ಷಿಕ ಮುಂಬಡ್ತಿಯನ್ನು ಸಂಚಿತ ಪರಿಣಾಮವಾಗಿ ತಡೆ ಹಿಡಿಯುವ ದಂಡನೆಯೊಂದಿಗೆ ನಿಯಮ 8(v)ರಂತೆ ಈ ಕೆಳಕಂಡಂತೆ ಅವರಿಂದ ಉಂಟಾಗಿರುವ ಆರ್ಥಿಕ ನಷ್ಟವನ್ನು ವಸೂಲು ಮಾಡುವ ದಂಡನೆಯನ್ನು ವಿಧಿಸಲಾಗಿತ್ತು.

| ಕ್ರ. ಸಂ. | ಆಪಾದಿತ ನೌಕರರ ಹೆಸರು ಮತ್ತು ಪದನಾಮ<br>**ಶ್ರೀಯುತ:** | ಸರ್ಕಾರಕ್ಕೆ ನಷ್ಟ ಆಗಿರುವ ಹಣ ರೂ. |
|---|---|---|
| 1 | 2 | 3 |
| 1. | ಹೆಚ್.ಎಸ್. ಪುನ್ನೆಶೆಟ್ಟಿ,<br>ಸಹಾಯಕ ಇಂಜಿನಿಯರ್. | 99,333-00 |
| 2. | ರಫಿಯುದ್ದೀನ್,<br>ಸಹಾಯಕ ಇಂಜಿನಿಯರ್. | 53212-00 |
| 3. | ವಿಜಯಕುಮಾರ್,<br>ಸಹಾಯಕ ಇಂಜಿನಿಯರ್. | 73,942-15 |
| 4. | ಬಸವರಾಜ್ ಸಜ್ಜನಶೆಟ್ಟಿ,<br>ಸಹಾಯಕ ಇಂಜಿನಿಯರ್. | 27201-45 |
| 5. | ಅಹಮ್ಮದ್ ಹುಸೇನ್,<br>ಕಿರಿಯ ಇಂಜಿನಿಯರ್. | 51993-80 |

| 1 | 2 | 3 |
|---|---|---|
| 6. | ಎಸ್.ಎ.ಎಂ. ಖಾದ್ರಿ,<br>ಕಿರಿಯ ಇಂಜಿನಿಯರ್. | 99632-30 |
| 7. | ಮಿಲನ್ ಕುಮಾರ್,<br>ಕಿರಿಯ ಇಂಜಿನಿಯರ್. | 19985-00 |
| 8. | ಎಸ್.ಆರ್. ಶಿರವಾಳ್,<br>ಕಿರಿಯ ಇಂಜಿನಿಯರ್. | 20010-00 |
| 9. | ಮಹಮದ್ ಸೈದುದ್ದೀನ್,<br>ಕಿರಿಯ ಇಂಜಿನಿಯರ್. | 7371-10 |
| 10. | ಕೆ.ಆರ್. ಈಶ್ವರಯ್ಯ,<br>ಪಂಪ್ ಆಪರೇಟರ್. | 24333-00 |

ಸದರಿ ದಂಡನೆಯ ಆದೇಶದ ವಿರುದ್ಧ ಶ್ರೀ ಮಹಮ್ಮದ್ ಸೈದುದ್ದೀನ್, ಕಿರಿಯ ಇಂಜಿನಿಯರ್, ಶ್ರೀ ರಫಿಯುದ್ದೀನ್, ಸಹಾಯಕ ಇಂಜಿನಿಯರ್, ಶ್ರೀ ಅಹಮದ್ ಹುಸೇನ್, ಕಿರಿಯ ಇಂಜಿನಿಯರ್, ಶ್ರೀ ಎಸ್.ಎ.ಎಂ. ಖಾದ್ರಿ, ಕಿರಿಯ ಇಂಜಿನಿಯರ್, ಶ್ರೀ ಹೆಚ್.ಎನ್. ಪುನ್ನೆಶೆಟ್ಟಿ, ಸಹಾಯಕ ಇಂಜಿನಿಯರ್ ಶ್ರೀ ವಿಜಯಕುಮಾರ್, ಕಿರಿಯ ಇಂಜಿನಿಯರ್, ಶ್ರೀ ಬಿ. ಸಜ್ಜನಶೆಟ್ಟಿ, ಸಹಾಯಕ ಇಂಜಿನಿಯರ್, ಮತ್ತು ಶ್ರೀ ಮಿಲನ್‌ಕುಮಾರ್, ಕಿರಿಯ ಇಂಜಿನಿಯರ್, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 1957ರ ನಿಯಮ 18ರಂತೆ ಗೌರವಾನ್ವಿತ ರಾಜ್ಯಪಾಲರಿಗೆ ಅಪೀಲು ಸಲ್ಲಿಸಿ ಸರ್ಕಾರವು ಮಾಡಿದ ಆದೇಶವನ್ನು ವಜಾಗೊಳಿಸುವಂತೆ ಕೋರಿರುತ್ತಾರೆ.

ಸದರಿ ಅಪೀಲುಗಳು ಮಾನ್ಯ ರಾಜ್ಯಪಾಲರ ಕಛೇರಿಯಲ್ಲಿ ವಿಲೇವಾರಿಗೆ ಬಾಕಿ ಇರುವಾಗ ಅಪೀಲುದಾರರ ಪೈಕಿ ಶ್ರೀ ರಫಿಯುದ್ದೀನ್, ಸಹಾಯಕ ಇಂಜಿನಿಯರ್, ಶ್ರೀ ಮಹಮ್ಮದ್ ಸೈದುದ್ದೀನ್, ಕಿರಿಯ ಇಂಜಿನಿಯರ್, ಶ್ರೀ ಅಹಮದ್ ಹುಸೇನ್, ಕಿರಿಯ ಇಂಜಿನಿಯರ್, ಶ್ರೀ ಹೆಚ್.ಎನ್. ಪುನ್ನೆಶೆಟ್ಟಿ, ಸಹಾಯಕ ಇಂಜಿನಿಯರ್, ಶ್ರೀ ವಿಜಯಕುಮಾರ್, ಕಿರಿಯ ಇಂಜಿನಿಯರ್, ಇವರುಗಳು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 842-845:2000 ಮತ್ತು 424:2000ಗಳನ್ನು ದಾಖಲಿಸಿ ತಮಗೆ ವಿಧಿಸಿದ್ದ ದಂಡನಾ ಆದೇಶವನ್ನು ಪ್ರಶ್ನಿಸಿದ್ದಾರೆ. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಸರ್ಕಾರದ ದಿನಾಂಕ:31.12.99ರ ದಂಡನೆ ಆದೇಶಕ್ಕೆ ದಿನಾಂಕ:06.09.2000ರಂದು ತಾತ್ಕಾಲಿಕ ತಡೆಯಾಜ್ಞೆಯನ್ನು ನೀಡಿರುತ್ತದೆ.

ಆಡಳಿತ ನ್ಯಾಯ ಮಂಡಳಿಯ ಕಾಯ್ದೆಯ ಕಲಂ 19(4)ರನ್ವಯ ಸದರಿ ಕಾಯ್ದೆಯಡಿ ನ್ಯಾಯ ಮಂಡಳಿಯಲ್ಲಿ ಅರ್ಜಿಯನ್ನು ದಾಖಲುಗೊಳಿಸಿದಾಗ ಅದೇ ವಿಷಯಕ್ಕೆ ಸಂಬಂಧಿಸಿದಂತೆ ಮೇಲ್ಮನವಿಗಳು ಬಾಕಿ ಇದ್ದಲ್ಲಿ ಅವುಗಳನ್ನು ತಡೆಹಿಡಿಯಬೇಕಾಗುತ್ತದೆ. ಆದಕಾರಣ ಅಪೀಲುದಾರರ ಪೈಕಿ ಈ ಬಗ್ಗೆ ಕೆಎಟಿಯಲ್ಲಿ ಅರ್ಜಿ ಹಾಕಿರುವ ಅಪೀಲುದಾರರ ಮೇಲ್ಮನವಿಗಳನ್ನು ಪರಿಶೀಲಿಸಲು:ಪರಿಗಣಿಸಲು ಅವಕಾಶವಿರುವುದಿಲ್ಲ.

ಇದಲ್ಲದೆ ಉಳಿದ ಮೇಲ್ಮನವಿದಾರರಾದ ಶ್ರೀ ಎಸ್.ಎ.ಎಂ. ಖಾದ್ರಿ, ಕಿರಿಯ ಇಂಜಿನಿಯರ್, ಶ್ರೀ ಬಿ. ಸಜ್ಜನಶೆಟ್ಟಿ, ಸಹಾಯಕ ಇಂಜಿನಿಯರ್, ಮತ್ತು ಶ್ರೀ ಮಿಲನ್‌ಕುಮಾರ್, ಕಿರಿಯ ಇಂಜಿನಿಯರ್ ಇವರು ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಿರುವ ಅಪೀಲುಗಳನ್ನು ಗೌರವಾನ್ವಿತ ರಾಜ್ಯಪಾಲರು ಕೂಲಂಕುಷವಾಗಿ ಪರಿಶೀಲಿಸಿ ಅಪೀಲುದಾರರ ಮೇಲ್ಮನವಿಗಳು ಅರ್ಹತೆಯ ಆಧಾರದ ಮೇಲಾಗಲೀ ಅಥವಾ ಇನ್ನಾವುದೇ ಕಾರಣಗಳಿಂದಾಗಲಿ ಪುರಸ್ಕರಿಸಲು ಯೋಗ್ಯವಲ್ಲವೆಂದು ಗೌರವಾನ್ವಿತ ರಾಜ್ಯಪಾಲರು ನಿರ್ಣಯಿಸಿ ಅವುಗಳನ್ನು ತಿರಸ್ಕರಿಸಲು ನಿರ್ಧರಿಸಿದ್ದಾರೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 156 ಜಿಪಅ 03, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಮಹಮ್ಮದ್ ಸೈದುದ್ದೀನ್, ಕಿರಿಯ ಇಂಜಿನಿಯರ್, ಶ್ರೀ ರಫಿಯುದ್ದೀನ್, ಸಹಾಯಕ ಇಂಜಿನಿಯರ್, ಶ್ರೀ ಅಹಮದ್ ಹುಸೇನ್, ಕಿರಿಯ ಇಂಜಿನಿಯರ್, ಶ್ರೀ ಹೆಚ್.ಎನ್. ಪುನ್ನೆಶೆಟ್ಟಿ, ಸಹಾಯಕ ಇಂಜಿನಿಯರ್, ಶ್ರೀ ವಿಜಯಕುಮಾರ್, ಕಿರಿಯ ಇಂಜಿನಿಯರ್, ಯಾಂತ್ರಿಕ ಉಪವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಗುಲ್ಬರ್ಗ ಇವರಿಗೆ ಸರ್ಕಾರಿ ಆದೇಶ ಸಂ. ಗ್ರಾಅಪ 119 ಇಎನ್‌ಕ್ಯೂ 96 ದಿನಾಂಕ: 31.12.99ರಲ್ಲಿ ವಿಧಿಸಿರುವ ದಂಡನೆ ಆದೇಶದ ವಿರುದ್ಧ ಅವರು ಗೌರವಾನ್ವಿತ ರಾಜ್ಯಪಾಲರಿಗೆ ಕರ್ನಾಟಕ ನಾಗರೀಕ ಸೇವೆ ನಿಯಮ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) 1957ರ ನಿಯಮ 18ರನ್ವಯ ಸಲ್ಲಿಸಿದ್ದ ಅಪೀಲನ್ನು ಆಡಳಿತ ನ್ಯಾಯ ಮಂಡಳಿಯ ಕಾಯ್ದೆ ಕಲಂ 19(4)ರನ್ವಯ ತಡೆ ಹಿಡಿಯಲು ಹಾಗೂ ಉಳಿದ ಅಪೀಲುದಾರರಾದ ಶ್ರೀ ಎಸ್.ಎ.ಎಂ. ಖಾದ್ರಿ, ಕಿರಿಯ ಇಂಜಿನಿಯರ್, ಶ್ರೀ ಬಿ. ಸಜ್ಜನಶೆಟ್ಟಿ, ಸಹಾಯಕ ಇಂಜಿನಿಯರ್, ಮತ್ತು ಶ್ರೀ ಮಿಲನ್ ಕುಮಾರ್, ಕಿರಿಯ ಇಂಜಿನಿಯರ್ ಇವರ ಅಪೀಲುಗಳನ್ನು ಪರಿಗಣಿಸಲು ಯಾವುದೇ ಯೋಗ್ಯವಾದ ಅಂಶಗಳು ಇಲ್ಲದಿರುವ ಕಾರಣ ಅವರ ಅಪೀಲುಗಳನ್ನು ವಜಾ ಮಾಡಲು ಗೌರವಾನ್ವಿತ ರಾಜ್ಯಪಾಲರು ಆದೇಶಿಸಿದ್ದಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಪಿ.ಆರ್. 1279 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.